॥ ಶ್ರೀಹರಿಃ ॥ 1994

# ಶ್ರೀ ಶಿವಮಹಿಮ್ನಃ ಸ್ತೋತ್ರಮ್

## श्रीशिवमहिम्नःस्तोत्रम् (कन्नड़)



॥ ಶ್ರೀಹರಿಃ ॥

# ಪ್ರಕಾಶಕೀಯ ನಿವೇದನ

ಇಡೀ ಭಾರತವರ್ಷವು ಶಿವಶಕ್ತಿಯರ ಛತ್ರಛಾಯೆಯ ಅಡಿಯಲ್ಲಿ ತಮ್ಮ-ತಮ್ಮ ಕರ್ಮಾನುಸಾರ ಆಧ್ಯಾತ್ಮಿಕ ಪ್ರಗತಿಯನ್ನು ಪಡೆಯುತ್ತದೆ. ಆದರಿಂದಲೇ ಉತ್ತರದ ಕೈಲಾಸದಲ್ಲಿ ಶ್ರೀ ಶಿವ ಮತ್ತು ದಕ್ಷಿಣ ತುದಿಯಲ್ಲಿ ಶ್ರೀ ಕನ್ಯಾಕುಮಾರಿ ಇವರ ಪವಿತ್ರ ವಾಸ ಸ್ಥಾನಗಳಿವೆ. ಎಲ್ಲ ದೇವತೆಗಳಿಗೆ, ವಿಶೇಷವಾಗಿ ಹರಿಹರರಿಗೆ ಗಾಯನ ಭಕ್ತಿ ಹೆಚ್ಚು ಪ್ರಿಯವಾಗಿದೆ. ಈ ಭಕ್ತಿಯನ್ನು ಮಾಡುವುದಕ್ಕಾಗಿ ಅನೇಕ ಸುರಾಸುರರ, ಋಷಿಗಳು, ಸಂತರು, ಭಗವಂತನ ಭಾವ ಪೂರ್ಣ ಸ್ತೋತ್ರಗಳನ್ನು ರಚಿಸಿರುವರು. ಅದರಲ್ಲಿ ಶ್ರೀ ವಿಷ್ಣುಸಹಸ್ರ ನಾಮ ಹಾಗೂ ಶ್ರೀ ಶಿವಮಹಿಮ್ನ ಎಂಬ ಎರಡು ಸ್ತೋತ್ರಗಳು ದಿವ್ಯವಾಗಿದ್ದು, ಅವುಗಳನ್ನು ಭಾರತವರ್ಷದಲ್ಲಿ ಭಾವಿಕರು ಪಠಿಸುತ್ತಾ ಇದ್ದಾರೆ. ಆದ್ದರಿಂದಲೇ ಈ ಶಿವಮಹಿಮ್ನ ಸ್ತೋತ್ರವನ್ನು ಕನ್ನಡದಲ್ಲಿ ಅರ್ಥಸಹಿತ ಪ್ರಕಟಿಸುತ್ತಿದ್ದೇವೆ.

ಶ್ರೀ ಶಿವಮಹಿಮ್ನದ ವಿಷಯದಲ್ಲಿ ಒಂದು ಆಖ್ಯಾಯಿಕೆ ಇದೆ – ಪುಷ್ಪದಂತ ಎಂಬ ಗಂಧರ್ವರಾಜನು ಶ್ರೀ ಶಿವನ ನಿಸ್ಸೀಮ ಭಕ್ತನಾಗಿದ್ದನು. ಅವನು ಶಿವನ ಪೂಜೆಗಾಗಿ ಒಬ್ಬ ರಾಜನ ಉದ್ಯಾನದಿಂದ ಗುಪ್ತವಾಗಿ ಹೂವುಗಳನ್ನು ಕೊಂಡ ಹೋಗುತ್ತಿದ್ದ. ರಾಜನಿಗೆ ಅನೇಕ ದಿನ ಇದು ತಿಳಿಯಲೇ ಇಲ್ಲ. ಆಗ ಆ ಗುಪ್ತ ವ್ಯಕ್ತಿಯ ಅದೃಶ್ಯವಾಗಿರುವ ಶಕ್ತಿಯನ್ನು ಇಲ್ಲವಾಗಿಸಲು, ರಾಜನು ಒಂದು ದಿನ ಉದ್ಯಾನದಲ್ಲಿ ಶಿವ ನಿರ್ಮಾಲ್ಯವನ್ನು ಹರಡಿ ಇಟ್ಟನು.

ಗಂಧರ್ವನು ಅದನ್ನು ದಾಟಿದ್ದರಿಂದ ಅವನ ಆ ಶಕ್ತಿಯು ನಾಶವಾಯಿತು. ಅವನು ಅದರ ಕಾರಣ ಹುಡುಕುವ ಪ್ರಯತ್ನ ಮಾಡಿದನು. ಆಗ ಅಲ್ಲಿ ಬಿದ್ದ ಬಿಲ್ವಪತ್ರೆಗಳು ಅವನಿಗೆ ಕಾಣಿಸಿತು. ಶಿವನಿರ್ಮಾಲ್ಯವನ್ನು ದಾಟಿದ್ದರಿಂದ ತನ್ನ ದಿವ್ಯಶಕ್ತಿ ನಷ್ಟವಾಯಿತೆಂದು ಅವನ ಗಮನಕ್ಕೆ ಬಂತು. ಅವನು ಕೂಡಲೇ ಶ್ರೀ ಶಿವನ ಬಳಿಗೆ ಹೋಗಿ ತನ್ನ ಅಪರಾಧಕ್ಕಾಗಿ ಕ್ಷಮೆ ಕೇಳಿ, ಶಿವನ ಕೃಪೆಯಿಂದಲೇ ಈ 'ದಿವ್ಯದಿವ್ಯಂ ಮಹಿಮ್ನಃ' ಸ್ತೋತ್ರವನ್ನು ರಚಿಸಿದನು. ಅದರಿಂದ ಅವನ ಕಳೆದುಹೋದ ಶಕ್ತಿಯು ಮರಳಿ ಬಂತು.

ಈ ಆಖ್ಯಾಯಿಕೆ ಹೇಗಿದ್ದರೂ ಈ ಸ್ತೋತ್ರಕ್ಕೆ ಶ್ರೀ ಶಂಕರನ ವರದಾನವಿದೆ. ಆದ್ದರಿಂದಲೇ ಎಲ್ಲೆಡೆ ಇದರ ಪಠಣ ನಡೆಯುತ್ತದೆ. ಅಭಿಷೇಕಕ್ಕಾಗಿಯೂ ರುದ್ರಾಧ್ಯಾಯದಂತೆ ಇದರ ಹನ್ನೊಂದು ಅಥವಾ ೧೨೧ ಆವರ್ತನಗಳನ್ನು ಮಾಡಲಾಗುತ್ತದೆ. ಅರ್ಥದೊಂದಿಗೆ ಓದಿದರೆ ಭಾವವು ಹೆಚ್ಚು ದೃಢವಾಗುತ್ತದೆ. ಆದ್ದರಿಂದ ಕನ್ನಡಿಗರಿಗಾಗಿ ಇದನ್ನು ಅರ್ಥಸಹಿತ ಪ್ರಕಟಿಸುತ್ತಿದ್ದೇವೆ.

ಇದರೊಂದಿಗೆ ಶಿವಮಾನಸಪೂಜಾ, ಶಿವಪಂಚಾಕ್ಷರ, ದ್ವಾದಶಜ್ಯೋತಿರ್ಲಿಂಗಸ್ತೋತ್ರ, ಲಿಂಗಾಷ್ಟಕ, ಅನ್ನಪೂರ್ಣಾ ಸ್ತೋತ್ರ ಮತ್ತು ಅಷ್ಟೋತ್ತರ ಶತನಾಮಾವಲಿ ಇವನ್ನೂ ಇದರಲ್ಲಿ ಸೇರಿಸಲಾಗಿದೆ. ಶಿವಭಕ್ತರು ಇದರ ಹೆಚ್ಚುಚ್ಚು ಲಾಭ ಪಡೆಯಬೇಕೆಂಬುದೇ ಪ್ರಾರ್ಥನೆ.

-ಪ್ರಕಾಶಕರು

# ಅನುಕ್ರಮಣಿಕೆ

॥ ಶ್ರೀಹರಿಃ ॥

# ಶ್ರೀ ಶಿವಧ್ಯಾನಮ್

ಧ್ಯಾಯೇನ್ನಿತ್ಯಂ ಮಹೇಶಂ ರಜತಗಿರಿನಿಭಂ ಚಾರುಚಂದ್ರಾವತಂಸಂ
ರತ್ನಾಕಲ್ಪೋಜ್ವಲಾಂಗಂ ಪರಶುಮೃಗವರಾಭೀತಿಹಸ್ತಂ ಪ್ರಸನ್ನಮ್ ।
ಪದ್ಮಾಸೀನಂ ಸಮಂತಾತ್ ಸ್ತುತಮಮರಗಣೈರ್ವ್ಯಾಘ್ರಕೃತ್ತಿಂ ವಸಾನಂ
ವಿಶ್ವಾದ್ಯಂ ವಿಶ್ವವಂದ್ಯಂ ನಿಖಿಲಭಯಹರಂ ಪಂಚವಕ್ತ್ರಂ ತ್ರಿನೇತ್ರಮ್ ॥೧॥

ಮಹೇಶಾನ್ನಾಪರೋ ದೇವೋ ಮಹಿಮ್ನೋ ನಾಪರಾ ಸ್ತುತಿಃ ।
ಅಘೋರಾನ್ನಾಪರೋ ಮಂತ್ರೋ ನಾಸ್ತಿ ತತ್ತ್ವಂ ಗುರೋಃ ಪರಮ್ ॥೨॥

(ಮೇಲಿನಂತೆ ಧ್ಯಾನವನ್ನು ಮಾಡಿ ಶಿವಮಹಿಮ್ನಃ ಸ್ತೋತ್ರವನ್ನು ಹೇಳಬೇಕು)

|| ಓಂ ನಮಃ ಶಿವಾಯ ||

# || ಶಿವಮಹಿಮ್ನಃ ಸ್ತೋತ್ರಮ್ ||

|| ಪುಷ್ಪದಂತ ಉವಾಚ ||

ಮಹಿಮ್ನಃ ಪಾರಂ ತೇ ಪರಮವಿದುಷೋ ಯದ್ಯಸದೃಶೀ
ಸ್ತುತಿರ್ಬ್ರಹ್ಮಾದೀನಾಮಪಿ ತದವಸನ್ನಾಸ್ತ್ವಯಿ ಗಿರಃ ।
ಅಥಾವಾಚ್ಯಃ ಸರ್ವಃ ಸ್ವಮತಿಪರಿಣಾಮಾವಧಿ ಗೃಣನ್
ಮಮಾಪ್ಯೇಷ ಸ್ತೋತ್ರೇ ಹರ ನಿರಪವಾದಃ ಪರಿಕರಃ ॥

ಪುಷ್ಪದಂತನು ಹೇಳುತ್ತಾನೆ -

ಹೇ ಭಗವಾನ್ ಶ್ರೀಹರನೇ ! ನಿನ್ನ ಮಹಿಮೆಯ ತುದಿ ಮೊದಲು ತಿಳಿಯದೇ ಮಾಡಿದ ನಿನ್ನ ಸ್ತುತಿಯು ಸಮಂಜಸವಲ್ಲದಿದ್ದರೆ ಬ್ರಹ್ಮಾದಿ ದೇವತೆಗಳು ನಿನ್ನನ್ನು ವರ್ಣಿಸದೆ ಸುಮ್ಮನೇ

ಇರಬೇಕಾದೀತು. (ಏಕೆಂದರೆ ಅವರಿಗೂ ನಿನ್ನ ಪೂರ್ಣ ಮಹಿಮೆ ಎಲ್ಲಿ ತಿಳಿದಿದೆ?) ತನ್ನ ಸ್ವಂತ ಬುದ್ಧಿಗನುಸಾರವಾಗಿ ಸ್ತುತಿಸುವ ಪ್ರತಿಯೊಬ್ಬನು ನಿರ್ದೋಷನೇ ಆಗಿದ್ದರೆ ಮತ್ತೆ ನಾನು ಮಾಡುವ ಈ ನಿನ್ನ ಸ್ತೋತ್ರ ವಿಷಯದ ಪ್ರಯತ್ನವು ನಿರ್ದೋಷವೆಂದೇ ತಿಳಿಯಬೇಕಾದೀತು. ॥೧॥

**ಅತೀತಃ ಪಂಥಾನಂ ತವ ಚ ಮಹಿಮಾ ವಾಙ್ಮನಸಯೋ-**
**ರತದ್ವ್ಯಾವೃತ್ತ್ಯಾ ಯಂ ಚಕಿತಮಭಿಧತ್ತೇ ಶ್ರುತಿರಪಿ ।**
**ಸ ಕಸ್ಯ ಸ್ತೋತವ್ಯಃ ಕತಿವಿಧಗುಣಃ ಕಸ್ಯ ವಿಷಯಃ**
**ಪದೇ ತ್ವರ್ವಾಚೀನೇ ಪತತಿ ನ ಮನಃ ಕಸ್ಯ ನ ವಚಃ ॥**

ವಾಸ್ತವಿಕವಾಗಿ ನೋಡಿದರೆ ನಿನ್ನ ನಿರ್ಗುಣ ಸ್ವರೂಪದ ಮಹಿಮೆ ವಾಣಿಗೆ, ಬಹುಶಃ ಮನಸ್ಸಿಗೂ ತಿಳಿಯ ದಾಗಿದೆ. ಅಪೌರುಷೇಯ ವೇದಗಳೂ ಕೂಡ ಹೆದರಿ-ಹೆದರಿ ನೇತಿ-ನೇತಿ (ಪರಮಾತ್ಮ ಇದ ಲ್ಲ-ಇದಲ್ಲ) ಎಂಬ ನಕಾರಾತ್ಮಕವಾಗಿಯೇ ನಿನ್ನ ರೂಪದ ಮಹಿಮೆಯನ್ನು ವರ್ಣಿಸುತ್ತವೆ. ಅಂತಹ ಅಪಾರ ಮಹಿಮೆಯನ್ನು ಯಾರು ತಾನೇ ವರ್ಣಿಸಬಲ್ಲರು? ನಿನ್ನ ಗುಣಗಳು ಎಷ್ಟು ವಿಧವಾಗಿವೆ

ಇದನ್ನು ಯಾರೂ ತಿಳಿಯಲಾರರು. ಆದರೆ ನಿನ್ನ ಸಗುಣ ರೂಪದ ಧ್ಯಾನದಲ್ಲಿ ಯಾರ ಮನಸ್ಸು ತೊಡಗಲಾರದು? ಅದನ್ನು ಯಾರ ವಾಣಿಯು ತಾನೇ ವರ್ಣಿಸಲಾರದು? ॥೨॥

ಮಧುಸ್ಫೀತಾ ವಾಚಃ ಪರಮಮಮೃತಂ ನಿರ್ಮಿತವತ-
ಸ್ತವ ಬ್ರಹ್ಮನ್ ಕಿಂ ವಾಗಪಿ ಸುರಗುರೋರ್ವಿಸ್ಮಯಪದಮ್ ।
ಮಮ ತ್ವೇತಾಂ ವಾಣೀಂ ಗುಣಕಥನ ಪುಣ್ಯೇನ ಭವತಃ
ಪುನಾಮೀತ್ಯರ್ಥೇಽಸ್ಮಿನ್ ಪುರಮಥನ ಬುದ್ಧಿರ್ವ್ಯವಸಿತಾ ॥

ಹೇ ಬ್ರಹ್ಮರೂಪನೇ ! ಪರಮಾಮೃತದಂತಿರುವ ಮಾಧುರ್ಯ ತುಂಬಿದ ವೇದವಾಣಿಯನ್ನು ನಿರ್ಮಿಸುವ ನಿನಗೆ ದೇವಗುರುಗಳ ವಾಣಿಯು ಮೋಹಗೊಳಿಸೀತೇ? ಆದರೂ ಎಲೈ ತ್ರಿಪುರಾರಿಯೇ ! ನಿನ್ನ ಗುಣಗಳನ್ನು ಕೊಂಡಾಡಿದ ಪುಣ್ಯದಿಂದ ನನ್ನ ವಾಣಿಯು ಪವಿತ್ರವಾಗಲಿ ಎಂದೇ ನನ್ನ ಬುದ್ಧಿ ಈ ಸ್ತೋತ್ರರಚನೆಗೆ ಪ್ರವೃತ್ತವಾಗಿದೆ. ॥೩॥

ತವೈಶ್ವರ್ಯಂ ಯತ್ತಜ್ಜಗದುದಯರಕ್ಷಾಪ್ರಲಯಕೃತ್
ತ್ರಯೀವಸ್ತುವ್ಯಸ್ತಂ ತಿಸೃಷು ಗುಣಭಿನ್ನಾಸು ತನುಷು ।
ಅಭವ್ಯಾನಾಮಸ್ಮಿನ್ ವರದ ರಮಣೀಯಾಮರಮಣೀಂ
ವಿಹಂತುಂ ವ್ಯಾಕ್ರೋಶೀಂ ವಿದಧತ ಇಹೈಕೇ ಜಡಧಿಯಃ ॥

ಎಲೈ ವರದನಾಯಕನೇ ! ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರ ಮಾಡುವ, ಸತ್ತ್ವ-ರಜ-ತಮ ಈ ತ್ರಿಗುಣಗಳಿಂದಾಗಿ ಬೇರೆ - ಬೇರೆಯಾದ ಬ್ರಹ್ಮಾ, ವಿಷ್ಣು ಮತ್ತು ಮಹೇಶ ಈ ಮೂರು ರೂಪಗಳಿಗಿಂತ ಬೇರೆಯೇ ತೋರುವ ನಿನ್ನ ಈಶ್ವರತ್ವವು ವಿಶ್ವದಲ್ಲಿ ಪ್ರಕಟವಾಗಿದೆ ಎಂದು ವೇದಗಳು ವರ್ಣಿಸಿವೆ. ಆದರೆ ಅದನ್ನು ಖಂಡಿಸುವ ಕೆಲವು ಮೂರ್ಖ ನಾಸ್ತಿಕರು (ಜಗತ್ತಿನಲ್ಲಿ ಈಶ್ವರ ಮುಂತಾದವು ಯಾವುದೂ ಇಲ್ಲ ಎಂಬ ರೀತಿಯ ) ಕರ್ಣ ಕರ್ಕಶವಾಗಿ ಗಳಹುತ್ತಾ ಇರುತ್ತಾರೆ. ಅದು ಹತಭಾಗ್ಯ ಜನರಿಗೇ ಮೆಚ್ಚುವುದು. ॥೪॥

ಕಿಮೀಹಃ ಕಿಂ ಕಾಯಃ ಸ ಖಲು ಕಿಮುಪಾಯಸ್ತ್ರಿಭುವನಂ
ಕಿಮಾಧಾರೋ ಧಾತಾ ಸೃಜತಿ ಕಿಮುಪಾದಾನ ಇತಿ ಚ ।
ಅತರ್ಕ್ಯೈಶ್ವರ್ಯೇ ತ್ವಯ್ಯನವಸರದುಃಸ್ಥೋ ಹತಧಿಯಃ
ಕುತರ್ಕೋಽಯಂ ಕಾಂಶ್ಚಿನ್ಮುಖರಯತಿ ಮೋಹಾಯ ಜಗತಃ ॥

(ಆ ಮೂರ್ಖರು ಹೀಗೆ ಕೇಳುತ್ತಾ ಇರುತ್ತಾರೆ,) ಆ ಪರಮೇಶ್ವರನು ಯಾವ ಕ್ರಿಯೆಯಿಂದ, ಯಾವ ಶರೀರದಿಂದ, ಯಾವ ಸಾಧನೆಗಳಿಂದ, ಯಾವುದರ ಆಧಾರದಲ್ಲಿ ಹಾಗೂ ಯಾವ ಮೂಲದ್ರವ್ಯದಿಂದ ಈ ಮೂರುಲೋಕಗಳನ್ನು ನಿರ್ಮಿಸುತ್ತಾನೆ? ಅವನ ಮಾಹಾತ್ಮ್ಯವು ತರ್ಕದಿಂದ ಯಾರಿಗೂ ತಿಳಿಯಲಾರದು, ನಿಮ್ಮ ವಿಷಯದಲ್ಲಿ ಈ ಪ್ರಶ್ನೆ ಹೊಂದಿಕೆಯಾಗುವುದಿಲ್ಲ. ಆದರೂ ಕೆಲವು ನಾಸ್ತಿಕರು ನಿಜವಾಗಿ ಜಗತ್ತನ್ನು ಮರಳುಗೊಳಿಸಲು (ವ್ಯಾವಹಾರಿಕ ಸಂದರ್ಭಗಳನ್ನು ನೀಡಿ) ಇತಂಹ ಬಾಲಿಶ ಪ್ರಶ್ನೆಗಳನ್ನು ಮಾಡುತ್ತಾ ಇರುತ್ತಾರೆ. ॥೫॥

ಅಜನ್ಮಾನೋ ಲೋಕಾಃ ಕಿಮವಯವವಂತೋಽಪಿ ಜಗತಾಮ್
ಅಧಿಷ್ಠಾತಾರಂ ಕಿಂ ಭವವಿಧಿರನಾದೃತ್ಯ ಭವತಿ ।
ಅನೀಶೋ ವಾ ಕುರ್ಯಾದ್ಭುವನ ಜನನೇ ಕಃ ಪರಿಕರೋ
ಯತೋ ಮಂದಾಸ್ತ್ವಾಂ ಪ್ರತ್ಯಮರವರ ಸಂಶೇರತ ಇಮೇ ॥

ಈ ಜನರು ಅವಯವಗಳಿಂಗ ಕೂಡಿದ್ದರೂ ಇವರು ಹುಟ್ಟಿಯೇ ಇಲ್ಲವೇ? (ಈ ವಿಶ್ವದ ಉತ್ಪತ್ತಿ ಇದ್ದರೆ) ಆ ವಿಶ್ವದ ಉತ್ಪತ್ತಿ ಕರ್ತನಲ್ಲದೆ ಹೇಗಾಗಬಲ್ಲುದು? ಈಶ್ವರನಿಲ್ಲದೆ ಬೇರೆ ಯಾರೋ ನಿರ್ಮಾತೃ ಇದ್ದರೆ, ಈ ವಿಶ್ವವನ್ನು ನಿರ್ಮಿಸಲು ಅವನ ಬಳಿ ಯಾವ ಸಾಮಗ್ರಿ ಇದೆ ?(ಇಂತಹ ಅನೇಕ ಪ್ರಶ್ನೆಗಳು ಉಂಟಾಗುವುದಿದ್ದರೂ) ಎಲೈ ದೇವಾಧಿದೇವನೇ ! ಈ ಜನರು ನಿನ್ನ ವಿಶ್ವನಿರ್ಮಿತಿಯ ಕುರಿತು ಸಂಶಯ ಪಡುವರು. ಏಕೆಂದರೆ ಅವರು ಮಂದಬುದ್ಧಿಯವರಾಗಿದ್ದಾರಲ್ಲ! ॥೬॥

ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ।

ರುಚೀನಾಂ ವೈಚಿತ್ರ್ಯಾದೃಜುಕುಟಿಲನಾನಾಪಥಜುಷಾಂ
ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥

ಮೂರುವೇದಗಳು, ಸಾಂಖ್ಯಶಾಸ್ತ್ರ ಯೋಗಶಾಸ್ತ್ರ ಶೈವಮತ, ಪಾಂಚರಾತ್ರ ಮೊದಲಾದ ಬೇರೆ - ಬೇರೆ ಶಾಸ್ತ್ರಗಳ ವಿಷಯದಲ್ಲಿ ಇದೇ ಶ್ರೇಷ್ಠವಾಗಿದೆ ಇದೇ ಹಿತಕಾರಕವಾಗಿದೆ ಎಂಬ ಮತಭಿನ್ನತೆ ಮನುಷ್ಯರಲ್ಲಿ ಕಂಡು ಬರುತ್ತದೆ. ಏಕೆಂದರೆ ಪ್ರತಿಯೊಬ್ಬರ ಇಷ್ಟ ಬೇರೆ-ಬೇರೆಯಾಗಿರುತ್ತದೆ. ಆದ ರಿಂದಾಗ ಒಳ್ಳೆಯ ಸಾಮಾನ್ಯ ಯಾವುದೇ ಮಾರ್ಗದಿಂದ ನಿನ್ನ ಉಪಾಸನೆ ಮಾಡಿದರೂ ಅವರಿಗೆ ಸಿಗು ವುದು ಮಾತ್ರ ನೀನೇ ಆಗಿರುವೆ. ಎಲ್ಲ ಕಡೆಯ ನೀರು ಕೊನೆಗೆ ಸಾಗರಕ್ಕೆ ಸೇರುವುದು ತಾನೇ ! ॥೭॥

ಮಹೋಕ್ಷಃ ಖಟ್ವಾಂಗಂ ಪರಶುರಜಿನಂ ಭಸ್ಮ ಫಣಿನಃ
ಕಪಾಲಂ ಚೇತೀಯತ್ತವ ವರದ ತಂತ್ರೋಪಕರಣಮ್ ।
ಸುರಾಸ್ತಾಂ ತಾಮೃದ್ಧಿಂ ದಧತಿ ತು ಭವದ್ಭ್ರೂಪ್ರಣಿಹಿತಾಂ
ನ ಹಿ ಸ್ವಾತ್ಮಾರಾಮಂ ವಿಷಯಮೃಗತೃಷ್ಣಾ ಭ್ರಮಯತಿ ॥

ಹೇ ವರದಾಯಕನೇ ! ದೊಡ್ಡನಂದೀ, ಖಟ್ವಾಂಗ ಮತ್ತು ಪರಶು ಈ ಆಯುಧಗಳು, ವ್ಯಾಘ್ರಾಜಿನ, ಭಸ್ಮ, ಸರ್ಪ ಹಾಗೂ ಕಪಾಲ ಇಷ್ಟೇ ಸಾಧನಸಾಮಗ್ರಿ ನಿನ್ನ ಬಳಿ ಇರುವುದು. ಆದರೆ ನಿನ್ನ ಕೃಪಾಕಟಾಕ್ಷದಿಂದ ದೊರೆತ ಬೇರೆ - ಬೇರೆ ವಿಧದ ವೈಭವಗಳನ್ನು ದೇವತೆಗಳು ಅನುಭವಿಸುತ್ತಾರೆ. (ನಿನಗೆ ಆದರ ಮೋಹ ಇರುವುದಿಲ್ಲ) ಏಕೆಂದರೆ ಆತ್ಮಾನಂದದಲ್ಲಿ ರಮಿಸುವವರನ್ನು ವಿಷಯ ಮರೀಚಿಕೆಯು ಮೋಹಿಸಲಾರದು. ||೮||

ಧ್ರುವಂ ಕಶ್ಚಿತ್ ಸರ್ವಂ ಸಕಲಮಪರಸ್ತ್ವ ಧ್ರುವಮಿದಮ್
ಪರೋ ಧ್ರೌವ್ಯಾಧ್ರೌವ್ಯೇ ಜಗತಿ ಗದತಿ ವ್ಯಸ್ತ ವಿಷಯೆ ।
ಸಮಸ್ತೇಽಪ್ಯೇತಸ್ಮಿನ್ ಪುರಮಥನ ತೈರ್ವಿಸ್ಮಿತ ಇವ
ಸ್ತುವನ್ ಜಿಹ್ವೇಮಿತ್ವಾಂ ನ ಖಲು ನನು ಧೃಷ್ಟಾ ಮುಖರತಾ ॥

ಎಲೈ ತ್ರಿಪುರನಾಶನಾ ! ಈ ವಿಶ್ವವು ಅವಿನಾಶಿಯಾಗಿದೆ ಎಂದು ಕೆಲವರು ಹೇಳುತ್ತಾರೆ; ಕೆಲವರು ಕ್ಷಣಭಂಗುರವೆಂದು ಹೇಳುವರು. ಇನ್ನೂ ಕೆಲವರು ಜಗತ್ತಿನಲ್ಲಿ ಕೆಲವು ಪದಾರ್ಥಗಳು ಅವಿನಾಶಿ

ಹಾಗೂ ಕೆಲವು ಪದಾರ್ಥಗಳು ವಿನಾಶಿಗಳೆಂದು ಹೇಳುತ್ತಾರೆ. ಇಂತಹ ಸ್ಥಿತಿಯಲ್ಲಿ ಆ ಎಲ್ಲ ಮತಮತಾಂತರಗಳ ಕುರಿತು ವಿಸ್ಮಿತನಾಗಿ ನಾನೂ ನಿನ್ನ ಸ್ತುತಿಯನ್ನು ಮಾಡಲು ನಾಚುವುದಿಲ್ಲ. (ಏಕೆಂದರೆ ಸರ್ವರೂಪನಾದ ನಿನ್ನನ್ನು ಹೇಗೆ ಸ್ತುತಿಸಿದರೂ ಅದು ಯೋಗ್ಯವೇ ಆಗುವುದು.) ತಾತ್ಪರ್ಯ, ಬಡಬಡಿಸುವುದಾದರೂ ಧೈರ್ಯ ಇರಬೇಕಾದುದು ಸತ್ಯ. ಮೇಲಿನ ವಿದ್ವಾಂಸರ ಮತಗಳಿರಲಿ, ನನ್ನ ಸ್ತುತಿ ಇರಲಿ, ಪರಬ್ರಹ್ಮಸ್ವರೂಪನಾದ ನಿನ್ನ ದೃಷ್ಟಿಯಿಂದ ಇದು ವಾಚಾಳಿತನವೇ ಅಲ್ಲವೇ? ॥೯॥

ತವೈಶ್ವರ್ಯಂ ಯತ್ನಾದ್ಯದುಪರಿ ವಿರಿಂಚಿರ್ಹರಿರಧಃ
ಪರಿಚ್ಛೇತ್ತುಂ ಯಾತಾವನಲಮನಲಸ್ಕಂಧ ವಪುಷಃ ।
ತತೋ ಭಕ್ತಿ ಶ್ರದ್ಧಾಭರಗುರು ಗೃಣದ್ಭ್ಯಾಂ ಗಿರಿಶ ಯತ್
ಸ್ವಯಂ ತಸ್ಥೇ ತಾಭ್ಯಾಂ ತವ ಕಿಮನುವೃತ್ತಿರ್ನ ಫಲತಿ ॥

ಎಲೈ ವಾಣಿಯ ಅಧಿಪತಿಯೇ! ಅಗ್ನಿಯಂತಹ ತೇಜಸ್ವೀ ಮೂರ್ತಿಯನ್ನು ಧರಿಸುವ ನಿನ್ನ

ಮಹಿಮೆಯ ತುದಿ - ಬುಡ ತಿಳಿಯಲು ಬ್ರಹ್ಮದೇವರು ಮೇಲೆ ಸತ್ಯಲೋಕದವರೆಗೆ ಹಾಗೂ ಶ್ರೀಹರಿಯು ಕೆಳಗೆ ಪಾತಾಳದವರೆಗೆ ಪ್ರಯತ್ನಪೂರ್ವಕ ಹೋದರು; ಆದರೆ ನಿನ್ನ ಮಹಿಮೆಯ ಅಂತ್ಯ ವನ್ನು ಅವರು ತಿಳಿಯದೇ ಹೋದರು. ಬಳಿಕ ಅತ್ಯಂತ ಶ್ರದ್ಧೆಯಿಂದ ಅವರು ನಿನ್ನನ್ನು ಸ್ತುತಿಸಿದಾಗ ಮಾತ್ರ ನೀನು ತನ್ನಿಚ್ಛೆಯಿಂದ ಅವರ ಎದುರಿಗೆ ಕಾಣಿಸಿಕೊಂಡೆ. ನಿಜವಾಗಿಯೂ ನಿನ್ನ ಸೇವೆ ಯಾವ ಫಲವನ್ನು ತಾನೇ ಕೊಡಲಾರದು ! (ಭಕ್ತಿಯಿಂದ ನೀನು ಸ್ವತಃ ಭಕ್ತಾಧೀನನಾಗಿರುವುದು ನಿಜವೇ ತಾನೆ !) ॥೧೦॥

**ಅಯತ್ನಾದಾಪಾದ್ಯ ತ್ರಿಭುವನಮವೈರವ್ಯತಿಕರಂ**
**ದಶಾಸ್ಯೋ ಯದ್ಬಾಹೂನಭೃತ ರಣಕಂಡೂ ಪರವಶಾನ್ ।**
**ಶಿರಃಪದ್ಮಶ್ರೇಣೀರಚಿತಚರಣಾಂಭೋರುಹಬಲೇಃ**
**ಸ್ಥಿರಾಯಾಸ್ತ್ವದ್ಭಕ್ತೇಃ ಸ್ತ್ರಿಪುರಹರ ವಿಸ್ಫೂರ್ಜಿತಮಿದಮ್ ॥**

ಎಲೈ ತ್ರಿಪುರಾಂತಕಾ ! ಇಪ್ಪತ್ತು ಭುಜಗಳಿದ್ದ ರಾವಣನಿಗೆ ಯುದ್ಧದ ತುರಿಕೆಯಿದ್ದರೂ (ಯುದ್ಧ

ಮಾಡದೆಯೇ) ಆಯಾಸವಿಲ್ಲದೆ ಶತ್ರುರಹಿತ ಮೂರುಲೋಕಗಳ ಸಾಮ್ರಾಜ್ಯವು ದೊರೆಯಿತು. ಅವನು ಸ್ವಂತ ತನ್ನ ಶಿರಕಮಲಗಳನ್ನು ನಿನ್ನ ಚರಣ ಕಮಲಗಳಲ್ಲಿ ಅರ್ಪಿಸಿ, ಮಾಡಿದ ದೃಢಭಕ್ತಿಯ ಪ್ರಭಾವವೇ ಇದಾಗಿದೆ. ॥೧೧॥

**ಅಮುಷ್ಯ ತ್ವತ್ಸೇವಾಸಮಧಿಗತಸಾರಂ ಭುಜವನಂ**
**ಬಲಾತ್ಕೈಲಾಸೇಽಪಿ ತ್ವದಧಿವಸತೌ ವಿಕ್ರಮಯತಃ ।**
**ಅಲಭ್ಯಾ ಪಾತಾಲೇಽಪ್ಯಲಸಚಲಿತಾಂಗುಷ್ಠಶಿರಸಿ**
**ಪ್ರತಿಷ್ಠಾತ್ವಯ್ಯಾಸೀದ್ ಧ್ರುವ ಮುಪಚಿತೋ ಮುಹ್ಯತಿ ಖಲಃ ॥**

ನಿನ್ನ ಸೇವೆಯಿಂದ ದೊರೆತ ಬಾಹುಶಕ್ತಿಯನ್ನು ನಿನ್ನ ವಾಸಸ್ಥಾನವಾದ ಕೈಲಾಸವನ್ನೇ ಕಿತ್ತು ಬಲವಂತವಾಗಿ ಲಂಕೆಗೆ ಎತ್ತಿಕೊಂಡು ಹೋಗಲು ಉಪಯೋಗಿಸಲು ತೊಡಗಿದಾಗ ನೀನು ಹೆಬ್ಬೆರಳ ತುದಿಯಿಂದ ಪರ್ವತವನ್ನು ಸ್ವಲ್ಪ ಅದುಮಿದಾಗ ಅದರ ಕೆಳಗೆ ಸಿಕ್ಕಿಹಾಕಿಕೊಂಡ ರಾವಣನಿಗೆ ಪಾತಾಳ ದಲ್ಲಿಯೂ ನಿಂತುಕೊಳ್ಳಲು ಕಷ್ಟವಾಯಿತು. ದುಷ್ಟರಿಗೆ ಐಶ್ವರ್ಯ ಬಂದರೆ ಅಹಂಕಾರ ಬರುವುದು ನಿಜ ತಾನೇ ! ॥೧೨॥

ಯದೃದ್ಧಿಂ ಸುತ್ರಾಮ್ಣೋ ವರದ ಪರಮೋಚ್ಚೈರಪಿ ಸತೀಮ್
ಅಧಶ್ಚಕ್ರೇ ಬಾಣಃ ಪರಿಜನವಿಧೇಯತ್ರಿಭುವನಃ ।
ನ ತಚ್ಚಿತ್ರಂ ತಸ್ಮಿನ್ವರಿವಸಿತರಿ ತ್ವಚ್ಚರಣಯೋ-
ರ್ನ ಕಸ್ಯಾಪ್ಯುನ್ನತ್ಯೈ ಭವತಿ ಶಿರಸಸ್ತ್ವಯ್ಯವನತಿಃ ॥

ಎಲೈ ವರದನಾಯಕನೇ ! ಬಾಣಾಸುರನು ಮೂರುಲೋಕಗಳನ್ನು ಪಾದಾಕ್ರಾಂತವಾಗಿಸಿದನು, ಇಂದ್ರನ ಸರ್ವೋಚ್ಚ ಸಂಪತ್ತನ್ನು ತನ್ನ ಸಂಪತ್ತಿನ ಮುಂದೆ ತುಚ್ಛವಾಗಿಸಿದನು. ಇದೆಲ್ಲವು ನಿನ್ನ ಚರಣಗಳನ್ನು ಪೂಜಿಸಿದವರ ಕುರಿತು ದೊಡ್ಡ ಆಶ್ಚರ್ಯಕರವಲ್ಲ. ಏಕೆಂದರೆ ನಿನ್ನ ಚರಣಗಳಲ್ಲಿ ಶಿರಬಾಗುವವರ ಉನ್ನತಿಯು ಆಗದೇ ಇರುವುದೇ? ॥೧೩॥

ಅಕಾಂಡಬ್ರಹ್ಮಾಂಡಕ್ಷಯಚಕಿತದೇವಾಸುರಕೃಪಾ
ವಿಧೇಯಸ್ಯಾಸೀದ್ಯಸ್ತ್ರಿನಯನವಿಷಂ ಸಂಹೃತವತಃ ।

ಸ ಕಲ್ಮಾಷಃ ಕಂಠೇ ತವ ನ ಕುರುತೇ ನ ಶ್ರಿಯಮಹೋ
ವಿಕಾರೋಽಪಿ ಶ್ಲಾಘ್ಯೋ ಭುವನ ಭಯಭಂಗವ್ಯಸನಿನಃ ॥

ಎಲೈ ತ್ರಿನೇತ್ರಧಾರಿಯೇ! (ಸಮುದ್ರಮಂಥನದ ಸಮಯ ಉತ್ಪನ್ನವಾದ ಕಾಲಕೂಟ ವಿಷದಿಂದ) ಅಕಸ್ಮಾತ್ತಾಗಿ ಬ್ರಹ್ಮಾಂಡ ನಾಶವೇ ಆಗುವುದೋ ಎಂದು ಭಯಗೊಂಡ ದೇವ ದಾನವರ ಮೇಲೆ ಕೃಪೆಯನ್ನು ಮಾಡಲು ಆ ವಿಷವನ್ನು ನೀನು ಕುಡಿದುಬಿಟ್ಟೆ. ಅದರಿಂದಾಗಿ ನಿನ್ನ ಕೊರಳು ನೀಲವಾಯಿತು. ಗೌರವವರ್ಣವುಳ್ಳ ನಿನಗೆ ಅದು ಶೋಭಿಸುವುದಿಲ್ಲ ಎಂದೇನಿಲ್ಲ. (ಭೂಷಣವೇ ಆಯಿತು) ಜಗತ್ತಿನ ಭಯವನ್ನು ದೂರಗೊಳಿಸುವ ವ್ಯಸನವುಳ್ಳ ಸಜ್ಜನರ ದೋಷವೂ ಪ್ರಶಂಸನೀಯವಾಗಿದೆ. ॥೧೪॥

ಅಸಿದ್ಧಾರ್ಥಾ ನೈವ ಕ್ವಚಿದಪಿ ಸದೇವಾಸುರನರೇ
ನಿವರ್ತಂತೇ ನಿತ್ಯಂ ಜಗತಿ ಜಯಿನೋ ಯಸ್ಯ ವಿಶಿಖಾಃ ।
ಸ ಪಶ್ಯನ್ನೀಶ ತ್ವಾಮಿತರಸುರಸಾಧಾರಣಮಭೂತ್
ಸ್ಮರಃ ಸ್ಮರ್ತವ್ಯಾತ್ಮಾ ನಹಿ ವಶಿಷು ಪಥ್ಯಃ ಪರಿಭವಃ ॥

ಎಲೈ ಈಶ್ವರನೇ! ಜಗತ್ತಿನಲ್ಲಿ ದೇವತೆಗಳಿರಲಿ, ರಾಕ್ಷಸರಿರಲಿ, ಮನುಷ್ಯರಿರಲಿ ಯಾರ ಮೇಲೆಯೂ ಎಲ್ಲೆಡೆ ವಿಜಯವನ್ನು ಪಡೆಯುವ ಮದನನ ಬಾಣಗಳು ನಿಷ್ಫಲವಾಗಲಿಲ್ಲ. ಅದೇ ಮನ್ಮಥನು ಇತರ ದೇವತೆಗಳಂತೆ ನೀನು ಎಂದು ತಿಳಿದು ನಿನ್ನ ಮೇಲೆ ಬಾಣ ಪ್ರಯೋಗಿಸಿದನು. ಆಗ ಮಾತ್ರ ಸತ್ವಃ ಅವನೇ (ನಿನ್ನ ಮೂರನೆಯ ಕಣ್ಣಿನ ಅಗ್ನಿಯಿಂದ ಭಸ್ಮವಾಗಿ) ನಾಮಾವಶೇಷನಾದನು. ಜಿತೇಂದ್ರಿಯ ಜನರಿಗೆ ಮಾಡಿದ ಅಪಮಾನವು ಸ್ವಂತದ್ದೇ ನಾಶವಾಗುವುದು ಸತ್ಯವೇ ಆಗಿದೆ. ॥೧೫॥

**ಮಹೀ ಪಾದಾಘಾತಾದ್ವ್ರಜತಿ ಸಹಸಾ ಸಂಶಯಪದಂ**
**ಪದಂ ವಿಷ್ಣೋರ್ಭ್ರಾಮ್ಯದ್‌ಭುಜಪರಿಘರುಗ್ಣಗ್ರಹಗಣಮ್ ।**
**ಮುಹುರ್ದ್ಯೌರ್ದೌಸ್ಥ್ಯಂ ಯಾತ್ಯನಿಭೃತಜಟಾತಾಡಿತತಟಾ**
**ಜಗದ್ರಕ್ಷಾಯೈ ತ್ವಂ ನಟಸಿ ನನು ವಾಮೈವ ವಿಭುತಾ ॥**

ಎಲೈ ಭಗವಂತನೇ ! ಜಗತ್ತಿನ ರಕ್ಷಣೆಗಾಗಿಯೇ ನೀನು ತಾಂಡವನೃತ್ಯ ಮಾಡುತ್ತಾ ಇರುವೆ. (ಆದರೆ ಆ ನೃತ್ಯದ ಸಮಯದಲ್ಲಿ) ನೆಲದ ಮೇಲೆ ಕಾಲನ್ನು ಅಪ್ಪಳಿಸುವಾಗ (ನಾನು ಪಾತಾಳಕ್ಕೆ

ಹೋದೆನೋ ಎಂಬ ಸಂಶಯದಿಂದ) ಪೃಥ್ವಿಯು ಒಂದೇ ರೀತಿ ನಡುಗತೊಡಗುತ್ತದೆ; (ಅಭಿನಯದ ಸಮಯ) ಪುಷ್ಟವಾದ ಕೈಗಳು ತಿರುಗಿಸುವುದರಿಂದ ಆಕಾಶದಲ್ಲಿರುವ ನಕ್ಷತ್ರಗಳು ಚೆಲ್ಲಾಪಿಲ್ಲಿಯಾಗಿ ಹೋಗುತ್ತವೆ ಹಾಗೂ ಕೆದರಿಕೊಂಡ ಜಟೆಗಳು ಅಲ್ಲಾಡುತ್ತಿರುವಾಗ ಸ್ವರ್ಗದ ದುರವಸ್ಥೆ ಏನಾಗುತ್ತದೋ ಕೇಳಲೇ ಬೇಡಿ. ದೊಡ್ಡತನವು ಒಂದು ದೃಷ್ಟಿಯಿಂದ ಕೆಟ್ಟದೆಂಬುದೇ ನಿಜವು.॥೧೬॥

**ವಿಯದ್ವ್ಯಾಪೀ ತಾರಾಗಣಗುಣಿತಫೇನೋದ್ಗಮರುಚಿಃ**
**ಪ್ರವಾಹೋ ವಾರಾಂ ಯಃ ಪೃಷತ ಲಘುದೃಷ್ಟಃ ಶಿರಸಿ ತೇ ।**
**ಜಗದ್ವೀಪಾಕಾರಂ ಜಲಧಿವಲಯಂ ತೇನ ಕೃತಮಿ-**
**ತ್ಯನೇನೈವೋನ್ನೇಯಂ ಧೃತಮಹಿಮ ದಿವ್ಯಂ ತವ ವಪುಃ ॥**

ಸಮಸ್ತ ಆಕಾಶವನ್ನೆ ವ್ಯಾಪಿಸಿದ ಹಾಗೂ ನಕ್ಷತ್ರಗಳ ಮೂಲಕ ನೊರೆಯ ಹೊಳಪು ಹೆಚ್ಚುತ್ತಿರುವ ಗಂಗೆಯ ಪ್ರವಾಹವು ನಿನ್ನ ಮಸ್ತಕದಲ್ಲಿ ಒಂದು ಹನಿಯಂತೆ ತೋರುತ್ತದೆ. ಆ ಪ್ರವಾಹದಿಂದಲೇ ಈ

ಸಮುದ್ರವಲಯಾಂಕಿತ ಜಗತ್ತು ದ್ವೀಪದ ಆಕಾರ ಹೊಂದಿದೆ. ಇದರಿಂದ ನಿನ್ನ ದಿವ್ಯ ಶರೀರದ ಹಿರಿತನದ ಅನುಮಾನ ಮಾಡಬಹುದು. ॥೧೭॥

ರಥಃ ಕ್ಷೋಣೀಯಂತಾ ಶತಧೃತಿರಗೇಂದ್ರೋ ಧನುರಥೋ
ರಥಾಂಗೋ ಚಂದ್ರಾರ್ಕೌ ರಥಚರಣಪಾಣಿಃ ಶರ ಇತಿ ।
ದಿಧಕ್ಷೋಸ್ತೇಕೋಽಯಂ ತ್ರಿಪುರತೃಣಮಾಡಂಬರ ವಿಧಿಃ
ವಿಧೇಯೈಃ ಕ್ರೀಡಂತ್ಯೋ ನ ಖಲು ಪರತಂತ್ರಾಃ ಪ್ರಭುಧಿಯಃ ॥

(ತ್ರಿಪುರಾಸುರನ ವಧೆಯ ಸಮಯ) ನೀನು ಪೃಥಿವಿಯನ್ನೇ ರಥವಾಗಿಸಿದೆ, ಬ್ರಹ್ಮದೇವರನ್ನು ಸಾರಥಿಯಾಗಿಸಿದೆ, ಮೇರುಪರ್ವತವನ್ನು ಧನುಸ್ಸನ್ನಾಗಿಸಿದೆ, ಚಂದ್ರ-ಸೂರ್ಯರನ್ನೇ ರಥದ ಗಾಲಿಗಳಾಗಿಸಿದೆ ಮತ್ತು ವಿಷ್ಣುವನ್ನೇ ಬಾಣವಾಗಿಸಿಕೊಂಡೆ. ತ್ರಿಪುರನೆಂಬ ಹುಲ್ಲನ್ನು ಸುಡಲು ಎಷ್ಟೊಂದು ಆಡಂಬರವನ್ನು ಮಾಡಿದೆ! (ಇವುಗಳಿಲ್ಲದೆ ನಿನ್ನಿಂದ ತ್ರಿಪುರಾಸುರನನ್ನು ಕೊಲ್ಲಲಾಗುತ್ತಿರಲಿಲ್ಲ ಎಂಬುದಲ್ಲ.) ನಿಜ

ವಾಗಿಯೂ ಈಶ್ವರೀ ಸಂಕಲ್ಪ ಬೇರೆಯವರ ಮೇಲೆ ಅವಲಂಬಿಸಿರುವುದಿಲ್ಲ. ತನ್ನ ಕಾರ್ಯಕ್ಕಾಗಿ ತನ್ನ ಲ್ಲಿದ್ದ ವಸ್ತುಗಳನ್ನು ಉಪಯೋಗಿಸಿಕೊಳ್ಳುವುದು, ಇದೊಂದು ಲೀಲೆ ಮಾತ್ರವಾಗಿದೆ. ॥೧೮॥

ಹರಿಸ್ತೇ ಸಾಹಸ್ರಂ ಕಮಲಬಲಿಮಾಧಾಯ ಪದಯೋ-
ರ್ಯ ದೇಕೋನೇ ತಸ್ಮಿನ್ನಿಜಮುದಹರನ್ನೇತ್ರ ಕಮಲಮ್ ।
ಗತೋ ಭಕ್ತ್ಯುದ್ರೇಕಃ ಪರಿಣತಿಮಸೌ ಚಕ್ರವಪುಷಾ
ತ್ರಯಾಣಾಂ ರಕ್ಷಾಯೈ ತ್ರಿಪುರಹರ ಜಾಗರ್ತಿ ಜಗತಾಮ್ ॥

ಎಲೈ ತ್ರಿಪುರನಾಶಕನೇ ! ಶ್ರೀಹರಿಯು ಒಂದು ಸಾವಿರ ಕಮಲ ಪುಷ್ಪಗಳನ್ನು ನಿನ್ನ ಚರಣಗಳಿಗೆ ಅರ್ಪಿಸಿ ಪೂಜಿಸುತ್ತಿದ್ದನು. ಆದರೆ (ಅದೇ ಸಂದರ್ಭಲ್ಲಿ) ಅದರಲ್ಲಿ ಒಂದು ಕಮಲವು ಕಡಿಮೆ ಬಿದ್ದಾಗ, ಅವನು ತನ್ನ ನೇತ್ರಕಮಲವನ್ನೇ ನಿನಗೆ ಏರಿಸಿದನು. ಅವನ ಈ ಭಕ್ತಿಯ ಪರಾಕಾಷ್ಠೆಯೇ ಸುದರ್ಶನ ಚಕ್ರರೂಪದಿಂದ ಪರಿಣತವಾಯಿತು. ಆ ಚಕ್ರವೇ ಇಂದು ಮೂರುಲೋಕಗಳ ರಕ್ಷಣೆಗಾಗಿ ಸದಾ ಜಾಗ್ರತವಾಗಿರುತ್ತದೆ. ॥೧೯॥

ಕ್ರತೌ ಸುಪ್ತೇ ಜಾಗ್ರತ್ತ್ವಮಸಿ ಫಲಯೋಗೇ ಕ್ರತುಮತಾಂ
ಕ್ವ ಕರ್ಮ ಪ್ರಧ್ವಸ್ತಂ ಫಲತಿ ಪುರುಷಾರಾಧನಮೃತೇ ।
ಅತಸ್ತ್ವಾಂ ಸಂಪ್ರೇಕ್ಷ್ಯ ಕ್ರತುಷು ಫಲದಾನಪ್ರತಿಭುವಂ
ಶ್ರುತೌ ಶ್ರದ್ಧಾಂ ಬಧ್ವಾದೃಢಪರಿಕರಃ ಕರ್ಮಸು ಜನಃ ॥

ಯಾಜ್ಞಿಕರು ಮಾಡಿದ ಯಜ್ಞ ಮುಗಿದಾಗ ಅದರ ಫಲವನ್ನು ಕೊಡುವುದಕ್ಕಾಗಿ ನೀನು ಎಚ್ಚರವಾಗಿರುವೆ. ಇಲ್ಲದಿದ್ದರೆ ನಾಶವಾದ ಕರ್ಮವು ಈಶ್ವರನ ಆರಾಧನೆಯಲ್ಲದೆ ಹೇಗೆ ತಾನೇ ಫಲಪ್ರದವಾಗುವುದು ! ಆದ್ದರಿಂದಲೇ ಯಜ್ಞಾದಿ ಕರ್ಮಗಳ ಫಲವನ್ನು ಕೊಡಲು ನೀನೇ ಸಿದ್ಧನಿರುವುದನ್ನು ನೋಡಿ ವೇದವಚನಗಳಲ್ಲಿ ಶ್ರದ್ಧೆಯಿಟ್ಟು ಜನರು ಕರ್ಮ ಮಾಡಲು ನಿಷ್ಠೆಯಿಂದ ತೊಡಗುತ್ತಾರೆ. ॥೨೦॥

ಕ್ರಿಯಾದಕ್ಷೋ ದಕ್ಷಃ ಕ್ರತುಪತಿರಧೀಶಸ್ತನುಭೃತಾ-
ಋಷೀಣಾಮಾರ್ತ್ವಿಜ್ಯಂ ಶರಣದ ಸದಸ್ಯಾಃ ಸುರಗಣಾಃ ।

ಕ್ರತುಭ್ರೇಷಸ್ತ್ವತ್ತಃ ಕ್ರತುಫಲವಿಧಾನವ್ಯಸನಿನೋ
ಧ್ರುವಂ ಕರ್ತುಃ ಶ್ರದ್ಧಾವಿಧುರಮಭಿಚಾರಾಯ ಹಿ ಮಖಾಃ ॥

ಎಲೈ ಆಶ್ರಯದಾತನೇ ! ಸರ್ವಪ್ರಾಣಿಗಳ ಸ್ವಾಮಿ ಹಾಗೂ ಕರ್ಮಕಾಂಡದಲ್ಲಿ ನಿಷ್ಣಾತನಾದ ದಕ್ಷ ಪ್ರಜಾಪತಿಯೇ ಯಜ್ಞದ ಯಜಮಾನ, ತ್ರಿಕಾಲಜ್ಞ ಋಷಿಗಳೇ ಋತ್ವಿಜರು, ದೇವತೆಗಳೇ ಸದಸ್ಯರು, ಇಂತಹ ಯಜ್ಞದ, ಯಜ್ಞದ ಫಲವನ್ನು ನಿಶ್ಚಿತವಾಗಿ ಕೊಡುವ ನಿನ್ನಿಂದಲೇ ವಿಧ್ವಂಸವಾಯಿತಲ್ಲ! ಇದು ಸರಿಯಾಗಿಯೇ ಇದೆ. ಶ್ರದ್ಧೆಯಿಲ್ಲದೆ ಮಾಡಿದ ಯಜ್ಞವು ಖಂಡಿತ ವಾಗಿ ಯಜಮಾನನ ನಾಶಕ್ಕೆ ಕಾರಣವಾಗುತ್ತದಲ್ಲ ! ॥೨೧॥

ಪ್ರಜಾನಾಥಂ ನಾಥ ಪ್ರಸಭಮಭಿಕಂ ಸ್ವಾಂ ದುಹಿತರಂ
ಗತಂ ರೋಹಿದ್ಭೂತಾಂ ರಿರಮಯಿಷುಮೃಷ್ಯಸ್ಯ ವಪುಷಾ ।
ಧನುಷ್ಪಾಣೇರ್ಯಾತಂ ದಿವಮಪಿ ಸಪತ್ರಾಕೃತಮಮುಂ
ತ್ರಸಂತಂ ತೇಽದ್ಯಾಪಿ ತ್ಯಜತಿ ನ ಮೃಗವ್ಯಾಧರಭಸಃ ॥

ಹೇ ನಾಥನೇ ! ಹೆಣ್ಣುಜಿಂಕೆಯಾದ ಸ್ವಂತ ಕನ್ಯೆಯೊಂದಿಗೆ ಜಿಂಕೆಯಾಗಿ ಬಲವಂತವಾಗಿ ರಮಿಸಲು ಇಚ್ಛಿಸಿದ ಕಾಮುಕ ಬ್ರಹ್ಮದೇವರಿಗೆ (ಶಾಸನ ಮಾಡಲಿಕ್ಕಾಗಿ) ಕೈಯಲ್ಲಿ ಧನುಸ್ಸನ್ನೆತ್ತಿಕೊಂಡು ಬೇಟೆಗಾರನಂತೆ ನೀನು ವೇಗವಾಗಿ ಬಾಣಪ್ರಯೋಗಿಸಿದೆ. ಆದರಿಂದ ಭಯಗೊಂಡ ಬ್ರಹ್ಮದೇವರು ಆಕಾಶಕ್ಕೆ ನೆಗೆದರು. ಇಂದೂ ಕೂಡ ಮೃಗಶಿರಾ ನಕ್ಷತ್ರ ರೂಪದಲ್ಲಿದ್ದ (ಆರ್ದ್ರಾನಕ್ಷತ್ರ ರೂಪದಿಂದಿರುವ) ನಿನ್ನ ವೇಗವುಳ್ಳ ಬಾಣ ಅವರ ಬೆನ್ನು ಬಿಡುವುದಿಲ್ಲ. ॥೨೨॥

**ಸ್ವಲಾವಣ್ಯಾಶಂಸಾಧೃತಧನುಷಮಹ್ನಾಯ ತೃಣವತ್**
**ಪುರಃ ಪ್ಲುಷ್ಟಂ ದೃಷ್ಟ್ವಾ ಪುರಮಥನ ಪುಷ್ಪಾಯುಧಮಪಿ ।**
**ಯದಿ ಸ್ತ್ರೈಣಂ ದೇವೀ ಯಮನಿರತ ದೇಹಾರ್ಧಘಟನಾದ್**
**ಅವೈತಿ ತ್ವಾಮದ್ಧಾ ಬತ ವರದ ಮುಗ್ಧಾ ಯುವತಯಃ ॥**

ಎಲೈ ತ್ರಿಪುರನಾಶಕನೇ! ತನ್ನ ಸ್ವಂತದ (ಪಾರ್ವತಿಯ) ಸೌಂದರ್ಯದ ಭರವಸೆಯಿಂದ (ನಿನ್ನನ್ನು ಗೆಲ್ಲಲು) ಧನುಸ್ಸನ್ನು ಸಿದ್ಧಗೊಳಿಸಿ ನಿನ್ನ ಮೇಲೆ ಬಾಣ ಬಿಡಲು ಹವಣಿಸುತ್ತಿರುವ ಕಾಮದೇವನನ್ನು

ನೀನು ಒಣಹುಲ್ಲಿನಂತೆ ಕ್ಷಣಮಾತ್ರದಲ್ಲಿ ತನ್ನೆದುರಿಗೆ ಸುಟ್ಟುಬಿಟ್ಟೆ. ಹೇ ಯೋಗೇಶ್ವರನೇ! ಇದೆಲ್ಲವನ್ನು ನೋಡಿಯೂ ಪಾರ್ವತಿದೇವಿಯು, ನೀನು ನಿನ್ನ ಶರೀರದ ಅರ್ಧಭಾಗದಲ್ಲಿ ಆಕೆಗೆ ಸ್ಥಾನ ಕೊಟ್ಟಿದ್ದರಿಂದ ನಿನ್ನನ್ನು ಸ್ತ್ರೀಸಕ್ತನೆಂದು ತಿಳಿದುಕೊಂಡಿದ್ದರೆ, ಎಲೈ ವರದನೇ! ಬಡಪಾಯಿ ಸ್ತ್ರೀಯರು ಮುಗ್ಧರಾಗಿರುತ್ತಾರೆ. (ಎಂದೇ ಹೇಳಬೇಕಾಗುವುದು.) ॥೨೩॥

**ಶ್ಮಶಾನೇಷ್ವಾಕ್ರೀಡಾ ಸ್ಮರಹರ ಪಿಶಾಚಾಃ ಸಹಚರಾ-**
**ಶ್ಚಿತಾಭಸ್ಮಾಲೇಪಃ ಸ್ರಗಪಿ ನೃಕರೋಟೀಪರಿಕರಃ ।**
**ಅಮಂಗಲ್ಯಂ ಶೀಲಂ ತವ ಭವತು ನಾಮ್ನೈವಮಖಿಲಂ**
**ತಥಾಽಪಿ ಸ್ಮರ್ತೄಣಾಂ ವರದ ಪರಮಂ ಮಂಗಲಮಸಿ ॥**

ಎಲೈ ಕಾಮನಾಶಕನೇ! ಶ್ಮಶಾನದಲ್ಲಿ ನಿನ್ನ ವಿಹಾರ, ನಿನ್ನ ಸಂಗಡಿಗರು ಪಿಶಾಚಿಗಳು, ಚಿತಾಭಸ್ಮವೇ ಅಂಗರಾಗವು, ನರಕಪಾಲಗಳ ಮಾಲೆ ಕೊರಳಿನಲ್ಲಿ; ಹೀಗೆ ನಿನ್ನ ಎಲ್ಲ ವೇಷ-ಭೂಷಣಗಳು ವ್ಯವಹಾರ

ದೃಷ್ಟಿಯಿಂದ ಅಮಂಗಲವೇ ಆಗಿದ್ದರೂ, ಹೇ ವರದಾಯಕನೇ ! ನಿನ್ನನ್ನು ಸ್ಮರಿಸುವವರಿಗೆ ಮಾತ್ರ ಅದು ಪರಮ ಕಲ್ಯಾಣ ಮಾಡುವುದಾಗಿದೆ. ॥೨೪॥

ಮನಃ ಪ್ರತ್ಯಕ್‌ಚಿತ್ತೇ ಸವಿಧಮವಿಧಾಯಾತ್ತಮರುತಃ
ಪ್ರಹೃಷ್ಯದ್ರೋಮಾಣಃ ಪ್ರಮದಸಲಿಲೋತ್ಸಂಗಿತದೃಶಃ ।
ಯದಾಲೋಕ್ಯಾಹ್ಲಾದಂ ಹ್ರದ ಇವ ನಿಮಜ್ಜ್ಯಾಮೃತಮಯೇ
ದಧತ್ಯಂತಸ್ತತ್ತ್ವಂ ಕಿಮಪಿ ಯಮಿನಸ್ತತ್ಕಿಲ ಭವಾನ್ ॥

ಯೋಗಿಗಳು ಯಥಾವಿಧಿ ಪ್ರಾಣಾಯಾಮಾದಿಗಳನ್ನು ಮಾಡಿ ಮನಸ್ಸನ್ನು ಅಂತರಾತ್ಮನಲ್ಲಿ ಏಕಾಗ್ರಗೊಳಿಸಿದಾಗ ಅವರ ಶರೀರದಲ್ಲಿ ಆನಂದದಿಂದ ರೋಮಾಂಚನವಾಗುತ್ತದೆ, ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿ ಬರುತ್ತವೆ. ಅಂತರಂಗದಲ್ಲಿ ಇರುವ ತತ್ತ್ವವನ್ನು ನೋಡಿದ್ದರಿಂದ ಅಮೃತದ ಸಾಗರದಲ್ಲಿ ಹಾರಬೇಕೆಂಬ ಪರಮಾನಂದ ಅವರಿಗೆ ಆಗುತ್ತದೆ. ಆ ತತ್ತ್ವವು ಭಗವಂತನೇ ! ನೀನೇ ಆಗಿರುವೆ. ॥೨೫॥

ತ್ವಮರ್ಕಸ್ತ್ವಂ ಸೋಮಸ್ತ್ವಮಸಿ ಪವನಸ್ತ್ವಂ ಹುತವಹ-
ಸ್ತ್ವಮಾಪಸ್ತ್ವಂ ವ್ಯೋಮ ತ್ವಮು ಧರಣಿರಾತ್ಮಾತ್ವಮಿತಿ ಚ ।
ಪರಿಚ್ಛಿನ್ನಾಮೇವಂ ತ್ವಯಿ ಪರಿಣತಾ ಬಿಭ್ರತು ಗಿರಂ
ನ ವಿದ್ಮಸ್ತತ್ತತ್ತ್ವಂ ವಯಮಿಹ ತು ಯತ್ತ್ವಂ ನ ಭವಸಿ ॥

ನೀನೇ ಸೂರ್ಯನಾಗಿರುವೆ. ಚಂದ್ರನಾಗಿರುವೆ, ವಾಯು ಆಗಿರುವೆ, ಅಗ್ನಿ ಆಗಿರುವೆ, ಜಲ, ಆಕಾಶ, ಪೃಥಿವಿ ನೀನೇ ಆಗಿರುವೆ ಮತ್ತು ಆತ್ಮನೂ ಆಗಿರುವೆ. ಹೀಗೆ ಅಷ್ಟಮೂರ್ತಿಗಳ ರೂಪದಲ್ಲಿ ನಿನ್ನನ್ನು ವಿದ್ವಾಂಸರು ಬೇಕಾದರೆ ವರ್ಣಿಸಲಿ. ಆದರೆ ಹೇ ವಿಶ್ವವ್ಯಾಪಕಾ ! ನೀನು ಅಲ್ಲದಿರುವ ತತ್ತ್ವವೇ ಈ ಚರಾಚರದಲ್ಲಿ ನಮಗೆ ಕಂಡು ಬರುವುದೇ ಇಲ್ಲ. ॥೨೬॥

ತ್ರಯೀಂ ತಿಸ್ರೋ ವೃತ್ತೀಸ್ತ್ರಿಭುವನಮಥೋ ತ್ರೀನಪಿ ಸುರಾನ್
ಅಕಾರಾದ್ಯೈರ್ವರ್ಣೈಸ್ತ್ರಿಭಿರಭಿದಧತ್ತೀರ್ಣವಿಕೃತಿ ।

**ತುರೀಯಂ ತೇ ಧಾಮ ಧ್ವನಿಭಿರವರುಂಧಾನಮಣುಭಿಃ**
**ಸಮಸ್ತ ವ್ಯಸ್ತಂ ತ್ವಾಂ ಶರಣದ ಗೃಣಾತ್ಯೋಮಿತಿ ಪದಮ್ ॥**

ಎಲೈ ಆಶ್ರಯದಾತಾ ಮಹಾದೇವಾ ! ಋಗ್ವೇದ, ಯಜುರ್ವೇದ, ಸಾಮವೇದ ಇವು ಮೂರು ವೇದಗಳು, ಜಾಗ್ರತಿ, ಸ್ವಪ್ನ, ಸುಷುಪ್ತಿ ಎಂಬ ಮೂರು ಸ್ಥಿತಿಗಳು, ಸ್ವರ್ಗ, ಮೃತ್ಯು, ಪಾತಾಳ ಈ ಮೂರು ಲೋಕಗಳು, ಬ್ರಹ್ಮಾ, ವಿಷ್ಣು ಮಹೇಶ ಈ ಮೂರು ದೇವತೆಗಳು, ಇವುಗಳ ಬೋಧ ಮಾಡಿಸುವ ಅಕಾರ, ಉಕಾರ, ಮಕಾರ, ಇವುಗಳಲ್ಲದೆ ಎಲ್ಲ ವಿಕಾರಗಳ ಆಚೆ ಇರುವ ನಿನ್ನ ನಾಲ್ಕನೆಯ ಪರಮಪದ ಬೋಧ ಮಾಡಿಸುವ ಸೂಕ್ಷ್ಮ ಧ್ವನಿಯಾದ ಓಂಕಾರ ಪದವು ವ್ಯಷ್ಟಿರೂಪದಲ್ಲಿ ಮತ್ತು ಸಮಷ್ಟಿ ರೂಪದಲ್ಲಿ ಇರುವುದು ನಿನ್ನನ್ನೇ ವರ್ಣಿಸುತ್ತದೆ. ॥೨೭॥

**ಭವಃ ಶರ್ವೋ ರುದ್ರಃ ಪಶುಪತಿರಥೋಗ್ರಃ ಸಹಮಹಾಂ-**
**ಸ್ತಥಾ ಭೀಮೇಶಾನಾವಿತಿ ಯದಭಿಧಾನಾಷ್ಟಕಮಿದಮ್ ।**
**ಅಮುಷ್ಮಿನ್ ಪ್ರತ್ಯೇಕಂ ಪ್ರವಿಚರತಿ ದೇವ ಶ್ರುತಿರಪಿ**
**ಪ್ರಿಯಾಯಾಸ್ಮೈ ಧಾಮ್ನೇ ಪ್ರವಿಹಿತ ನಮಸ್ಯೋಽಸ್ಮಿ ಭವತೇ ॥**

ಎಲೈ ದೇವನೇ ! ಭವ, ಶರ್ವ, ರುದ್ರ, ಪಶುಪತಿ, ಉಗ್ರ, ಮಹಾದೇವ, ಭೀಮ ಮತ್ತು ಈಶಾನ ಈ ನಿನ್ನ ಎಂಟು ನಾಮಗಳು ವೇದಪ್ರತಿಪಾದಿತಗಳೇ ಆಗಿವೆ. ಈ ಹೆಸರುಗಳುಳ್ಳ ಪರಮಪ್ರಿಯ ಹಾಗೂ ಸ್ವಪ್ರಕಾಶರೂಪನಾಗಿರುವ ನಿನಗೆ ನಾನು ನಮಸ್ಕರಿಸುತ್ತೇನೆ. ॥೨೮॥

ನಮೋ ನೇದಿಷ್ಠಾಯ ಪ್ರಿಯದವ ದವಿಷ್ಠಾಯ ಚ ನಮೋ
ನಮಃ ಕ್ಷೋದಿಷ್ಠಾಯ ಸ್ಮರಹರ ಮಹಿಷ್ಠಾಯ ಚ ನಮಃ ।
ನಮೋ ವರ್ಷಿಷ್ಠಾಯ ತ್ರಿನಯನ ಯವಿಷ್ಠಾಯ ಚ ನಮೋ
ನಮಃ ಸರ್ವಸ್ಮೈ ತೇ ತದಿದಮಿತಿ ಶರ್ವಾಯ ಚ ನಮಃ ॥

ಎಲೈ ವನಪ್ರಿಯ ದೇವಾ !ಅತ್ಯಂತ ಹತ್ತಿರ ಹಾಗೂ ಅತ್ಯಂತ ದೂರವಿರುವ ನಿನಗೆ ನಮಸ್ಕಾರವು. ಹೇ ಮದನಾಂತಕಾ ! ಅತ್ಯಂತ ಸೂಕ್ಷ್ಮ ಮತ್ತು ಅತ್ಯಂತ ಮಹಾನ್ ಆಗಿರುವ ನಿನಗೆ ನಮಸ್ಕಾರವು. ಹೇ ತ್ರಿನಯನನೇ ! ಎಲ್ಲರಿಗಿಂತ ವೃದ್ಧ ಹಾಗೂ ಎಲ್ಲರಿಗಿಂತ ತರುಣನಾಗಿರುವ ನಿನಗೆ ನಮಸ್ಕಾರಗಳು. ಪರೋಕ್ಷ ಮತ್ತು ಅಪರೋಕ್ಷನಾಗಿರುವ ವಿಶ್ವರೂಪ ಶಿವನಿಗೆ ನಮಸ್ಕಾರಗಳು. ॥೨೯॥

ಬಹುಲ ರಜಸೇ ವಿಶ್ವೋತ್ಪತ್ತೌ ಭವಾಯ ನಮೋ ನಮಃ
ಪ್ರಬಲತಮಸೇ ತತ್ಸಂಹಾರೇ ಹರಾಯ ನಮೋ ನಮಃ ।
ಜನಸುಖಕೃತೇ ಸತ್ತ್ವೋದ್ರಿಕ್ತೌ ಮೃಡಾಯ ನಮೋ ನಮಃ
ಪ್ರಮಹಸಿ ಪದೇ ನಿಸ್ತ್ರೈಗುಣ್ಯೇ ಶಿವಾಯ ನಮೋ ನಮಃ ॥

ವಿಶ್ವೋತ್ಪತ್ತಿಯ ಸಮಯ, ರಜೋಗುಣ ಪ್ರಧಾನ ಬ್ರಹ್ಮದೇವ ಸ್ವರೂಪ ಭವನಿಗೆ ನನ್ನ ನಮಸ್ಕಾರ. ವಿಶ್ವಸಂಹಾರದ ಸಮಯ ತಮೋಗುಣ ಪ್ರಬಲವಾಗಿರುವ ರುದ್ರಸ್ವರೂಪ ಹರನಿಗೆ ನನ್ನ ನಮಸ್ಕಾರ. ಜನರಿಗೆ ಸುಖವನ್ನು ಕೊಡಲಿಕ್ಕಾಗಿ ಸತ್ತ್ವಗುಣವು ಹೆಚ್ಚಾಗಿರುವ ವಿಷ್ಣುಸ್ವರೂಪ ಮೃಡನಿಗೆ ನನ್ನ ನಮಸ್ಕಾರ. ತ್ರಿಗುಣಾತೀತ ಅತ್ಯಂತ ತೇಜೋಮಯ ಪರಮಪದದಲ್ಲಿ ವಾಸಿಸುವ ಶಿವನಿಗೆ ನನ್ನ ನಮಸ್ಕಾರ. ॥೩೦॥

ಕೃಶಪರಿಣತಿ ಚೇತಃ ಕ್ಲೇಶವಶ್ಯಂ ಕ್ವ ಚೇದಂ
ಕ್ವ ಚ ತವ ಗುಣಸೀಮೋಲ್ಲಂಘಿನೀ ಶಶ್ವದೃದ್ಧಿಃ ।

ಇತಿ ಚಕಿತ ಮಮಂದೀಕೃತ್ಯ ಮಾಂ ಭಕ್ತಿರಾಧಾದ್
ವರದ ಚರಣಯೋಸ್ತೇ ವಾಕ್ಯಪುಷ್ಪೋಪಹಾರಮ್ ॥

ಎಲೈ ವರದಾಯಕನೇ ! ಅಪರಿಪಕ್ವ, ಹಾಗೂ ಅತ್ಯಂತ ಕಷ್ಟದಿಂದ ಹತೋಟಿಯಲ್ಲಿರುವ ಈ ನನ್ನ ಮನಸ್ಸು ಎಲ್ಲಿ, ಗುಣಗಳ ಸೀಮೆಯನ್ನು ದಾಟಿರುವ ನಿನ್ನ ಶಾಶ್ವತ ಸಮೃದ್ಧೀ ಎಲ್ಲಿ! ಇದರಿಂದ ಭಯಗೊಂಡ ನನ್ನನ್ನು ನಿನ್ನ ಭಕ್ತಿಯಿಂದ ಪ್ರೋತ್ಸಾಹಿಸಿ ನನ್ನಿಂದ ಈ ಶಬ್ದಕುಸುಮಗಳ ಉಪಹಾರವನ್ನು ಸಿದ್ಧಗೊಳಿಸಿಕೊಂಡೆ. ಅದನ್ನು ನಾನು ನಿನ್ನ ಚರಣಗಳಲ್ಲಿ ಅರ್ಪಿಸುತ್ತಿದ್ದೇನೆ. ॥೩೧॥

ಅಸಿತಗಿರಿಸಮಂ ಸ್ಯಾತ್ ಕಜ್ಜಲಂ ಸಿಂಧುಪಾತ್ರೇ
ಸುರತರುವರಶಾಖಾ ಲೇಖನೀ ಪತ್ರಮುರ್ವೀ ।
ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವ ಕಾಲಂ
ತದಪಿ ತವ ಗುಣಾನಾಮೀಶ ಪಾರಂ ನ ಯಾತಿ ॥

ಎಲೈ ಈಶ್ವರನೇ ! ಸಮುದ್ರವೆಂಬ ಪಾತ್ರೆಯಲ್ಲಿ ಪರ್ವತದಷ್ಟು ಮಸಿಯನ್ನು ಹಾಕಿ ಶಾಯಿ

ಸಿದ್ಧಗೊಳಿಸಿ, ಕಲ್ಪವೃಕ್ಷದ ರೆಂಬೆಯನ್ನೇ ಲೆಕ್ಕಣಿಗೆಯಾಗಿ ಮಾಡಿ, ಪೃಥಿವಿಯನ್ನೆ ಬಿಳಿಹಾಳೆ ಯಾಗಿಸಿ, ಸ್ವತಃ ಸರಸ್ವತಿಯೇ ಸತತ ಬರೆಯುತ್ತಾ ಕುಳಿತರೂ ನಿನ್ನ ಸಮಸ್ತ ಗುಣಗಳನ್ನು ಆಕೆಯೂ ಬರೆಯಲಾರಳು. ||೩೨||

ಅಸುರಸುರಮುನೀಂದ್ರೈರರ್ಚಿತಸ್ಯೇಂದುಮೌಲೇ-
ರ್ಗ್ರಥಿತಗುಣಮಹಿಮ್ನೋ ನಿರ್ಗುಣಸ್ಯೇಶ್ವರಸ್ಯ ||
ಸಕಲಗಣವರಿಷ್ಠಃ ಪುಷ್ಪದಂತಾಭಿಧಾನೋ
ರುಚಿರಮಲಘುವೃತ್ತೈಃ ಸ್ತೋತ್ರಮೇತಚ್ಚಕಾರ ||

ವಾಸ್ತವವಾಗಿ ಈಶ್ವರನು ನಿರ್ಗುಣನಾಗಿರುವನು ; ಹೀಗಿದ್ದರೂ ಅವನ ಶ್ರೇಷ್ಠ ಗುಣಗಳನ್ನು ಎಲ್ಲೆಡೆ ವರ್ಣಿಸಲಾಗುತ್ತದೆ. ಅಸುರರು, ದೇವತೆಗಳು ಮತ್ತು ದೊಡ್ಡ-ದೊಡ್ಡ ಋಷಿಗಳು ಪೂಜಿಸುತ್ತಿರುವ ಚಂದ್ರಮೌಳಿ ಶಿವನ ಈ ಸುಂದರ ಸ್ತೋತ್ರವನ್ನು, ಅವನ ಎಲ್ಲ ಗಣಗಳಲ್ಲಿ ಶ್ರೇಷ್ಠನಾದ ಪುಷ್ಪದಂತ ಎಂಬ ಗಂಧರ್ವನು ಶಿಖರಿಣೀ ಎಂಬ ದೊಡ್ಡ ವೃತ್ತದಲ್ಲಿ ರಚಿಸಿರುವನು. ||೩೩||

ಅಹರಹರನವದ್ಯಂ ಧೂರ್ಜಟೇಃ ಸ್ತೋತ್ರಮೇತತ್
ಪಠತಿ ಪರಮಭಕ್ತ್ಯಾ ಶುದ್ಧಚಿತ್ತಃ ಪುಮಾನ್ಯಃ ।
ಸ ಭವತಿ ಶಿವಲೋಕೇ ರುದ್ರತುಲ್ಯಸ್ತಥಾऽತ್ರ
ಪ್ರಚುರತರಧನಾಯುಃ ಪುತ್ರವಾನ್ ಕೀರ್ತಿಮಾಂಶ್ಚ ॥

ಶುದ್ಧ ಅಂತಃಕರಣದಿಂದ ಶ್ರೀಶಿವನ ಈ ಪವಿತ್ರ ಸ್ತೋತ್ರವನ್ನು ಪ್ರತಿದಿನವೂ ಅತ್ಯಂತ ಭಕ್ತಿಯಿಂದ ಪಠಿಸುವ ಮನುಷ್ಯನಿಗೆ ಜಗತ್ತಿನಲ್ಲಿ ಹೆಚ್ಚಿನ ಐಶ್ವರ್ಯ, ದೀರ್ಘಾಯುಷ್ಯ, ಪುತ್ರ-ಪೌತ್ರ ಮತ್ತು ಕೀರ್ತಿ ಲಭಿಸಿ ಬಳಿಕ ಅವನು ಶಿವಲೋಕದಲ್ಲಿ ಶಿವನಂತೆಯೇ ಆಗುವನು. ॥೩೪॥

ಮಹೇಶಾನ್ನಾಪರೋ ದೇವೋ ಮಹಿಮ್ನೋ ನಾಪರಾ ಸ್ತುತಿಃ ।
ಅಘೋರಾನ್ನಾಪರೋ ಮಂತ್ರೋ ನಾಸ್ತಿ ತತ್ವಂ ಗುರೋಃ ಪರಮ್ ॥

ಶ್ರೀಶಿವನಿಗಿಂತ ಹೆಚ್ಚಿನ ಶ್ರೇಷ್ಠ ದೇವರು ಇಲ್ಲ. ಮಹಿಮ್ನಸ್ತೋತ್ರಕ್ಕಿಂತ ಶ್ರೇಷ್ಠ ಇನ್ನೊಂದು ಸ್ತೋತ್ರವಿಲ್ಲ. ಅಘೋರೇಭ್ಯೋ ಈ ಮಂತ್ರಕ್ಕಿಂತ ಶ್ರೇಷ್ಠ ಮಂತ್ರ ಇನ್ನೊಂದಿಲ್ಲ. ಶ್ರೀಗುರುವಿಗಿಂತ ಶ್ರೇಷ್ಠ ತತ್ತ್ವವು ಇಲ್ಲ. ||೩೫||

**ದೀಕ್ಷಾದಾನಂ ತಪಸ್ತೀರ್ಥಂ ಜ್ಞಾನಂ ಯಾಗಾದಿಕಾಃ ಕ್ರಿಯಾಃ ।**
**ಮಹಿಮ್ನಃ ಸ್ತವಪಾಠಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥**

ದೀಕ್ಷೆ ಪಡೆಯುವುದು, ದಾನ ಮಾಡುವುದು, ತಪಶ್ಚರ್ಯೆ, ತೀರ್ಥಯಾತ್ರೆ, ಜ್ಞಾನ, ಯಜ್ಞಯಾಗಾದಿ ಕರ್ಮ ಗಳು, ಇವುಗಳಲ್ಲಿ ಯಾವುದೂ ಕೂಡ ಮಹಿಮ್ನಃ ಸ್ತೋತ್ರ ಪಠಣದ ಹದಿನಾರನೆಯ ಒಂದಂಶ ಯೋಗ್ಯತೆಯೂ ಪಡೆದಿಲ್ಲ. ||೩೬||

**ಕುಸುಮದಶನನಾಮಾ ಸರ್ವಗಂಧರ್ವರಾಜಃ**
**ಶಿಶುಶಶಿಧರಮೌಲೇರ್ದೇವದೇವಸ್ಯ ದಾಸಃ ।**

ಸಖಲು ನಿಜಮಹಿಮ್ನೋ ಭ್ರಷ್ಟ ಏವಾಸ್ಯ ರೋಷಾತ್
ಸ್ತವನಮಿದಮಕಾರ್ಷೀದ್ ದಿವ್ಯದಿವ್ಯಂ ಮಹಿಮ್ನಃ ॥

ಪುಷ್ಪದಂತನೆಂಬ ಎಲ್ಲ ಗಂಧರ್ವರ ರಾಜನು ಚಂದ್ರಮೌಳಿ ಮಹಾದೇವನ ಸೇವಕನಾಗಿದ್ದನು. ಒಮ್ಮೆ ಅವನು ಶ್ರೀಶಂಕರನ ಕ್ರೋಧದಿಂದ ತನ್ನ ಮಹಿಮೆಯನ್ನು ಕಳೆದುಕೊಂಡನು. (ಅದನ್ನು ಪುನಃ ಪಡೆದುಕೊಳ್ಳಲು) ಅವನು ಈ ಭಗವಾನ್ ಶಿವನ ಮಾಹಾತ್ಮ್ಯವನ್ನು ಹೇಳುವ ಅತ್ಯಂತ ದಿವ್ಯ ಸ್ತೋತ್ರವನ್ನು ರಚಿಸಿದನು. ॥೩೭॥

ಸುರವರಮುನಿ ಪೂಜ್ಯಂ ಸ್ವರ್ಗಮೋಕ್ಷೈಕ ಹೇತುಮ್
ಪಠತಿ ಯದಿ ಮನುಷ್ಯಃ ಪ್ರಾಂಜಲಿರ್ನಾನ್ಯಚೇತಾಃ ।
ವ್ರಜತಿ ಶಿವಸಮೀಪಂ ಕಿನ್ನರೈಃ ಸ್ತೂಯಮಾನಃ
ಸ್ತವನಮಿದಮಮೋಘಂ ಪುಷ್ಪದಂತ ಪ್ರಣೀತಮ್ ॥

ಶ್ರೇಷ್ಠ ದೇವತೆಗಳಿಗೆ ಮತ್ತು ಮುನಿಗಳಿಗೆ ಪೂಜ್ಯವಾದ, ಸ್ವರ್ಗ ಹಾಗೂ ಮೋಕ್ಷವನ್ನು ದೊರಕಿಸಿ ಕೊಡುವ ಮುಖ್ಯ ಸಾಧನೆಯಾದ ಪುಷ್ಪದಂತವಿರಚಿತ, ಫಲಪ್ರಾಪ್ತಿ ಮಾಡಿಸಿಕೊಡುವ ಈ ಸ್ತೋತ್ರವನ್ನು ಮನುಷ್ಯನು ಏಕಾಗ್ರಚಿತ್ತದಿಂದ ಕೈಮುಗಿದುಕೊಂಡು ಹೇಳಿದರೆ ಕಿನ್ನರರಿಂದ ಸ್ತುತಿಯನ್ನು ಪಡೆಯುತ್ತಾ ಶಿವನ ಬಳಿಗೆ ಹೋಗುತ್ತಾನೆ. ||೩೮||

**ಆಸಮಾಪ್ತಮಿದಂ ಸ್ತೋತ್ರಂ ಪುಣ್ಯಂ ಗಂಧರ್ವಭಾಷಿತಮ್ ।**
**ಅನೌಪಮ್ಯಂ ಮನೋಹಾರಿ ಶಿವಮೀಶ್ವರವರ್ಣನಮ್ ॥**

ಪುಷ್ಪದಂತ ಗಂಧರ್ವನು ರಚಿಸಿದ ಶಿವವರ್ಣನಪರ ಈ ಸ್ತೋತ್ರವು ಮೊದಲಿನಿಂದ ಕೊನೆಯವರೆಗೂ ಪವಿತ್ರವೂ, ಮನೋಹರವೂ, ಕಲ್ಯಾಣಕಾರಕವೂ ಆಗಿದೆ. ||೩೯||

**ಇತ್ಯೇಷಾ ವಾಙ್ಮಯೀ ಪೂಜಾ ಶ್ರೀಮಚ್ಛಂಕರ ಪಾದಯೋಃ ।**
**ಅರ್ಪಿತಾ ತೇನ ದೇವೇಶಃ ಪ್ರೀಯತಾಂ ಮೇ ಸದಾಶಿವಃ ॥**

ಇಂತಹ ಈ ಶಬ್ದಕುಸುಮಾಂಜಲಿಯನ್ನು ನಾನು ಭಗವಾನ್ ಶಂಕರನ ಚರಣಗಳಲ್ಲಿ ಅರ್ಪಿಸುತ್ತಿದ್ದೇನೆ. ಆದರಿಂದ ದೇವಾಧಿದೇವ ಸದಾಶಿವನು ನನ್ನ ಮೇಲೆ ಪ್ರಸನ್ನನಾಗಲಿ. ॥೪೦॥

**ತವ ತತ್ತ್ವಂ ನ ಜಾನಾಮಿ ಕೀದೃಶೋಽಸಿ ಮಹೇಶ್ವರ ।**
**ಯಾದೃಶೋಽಸಿ ಮಹಾದೇವ ತಾದೃಶಾಯ ನಮೋ ನಮಃ ॥**

ಹೇ ಮಹೇಶ್ವರನೇ! ನೀನು ಹೇಗಿರುವೆ? ಎಂಬ ನಿನ್ನ ವಾಸ್ತವಿಕ ಸ್ವರೂಪ ನನಗೆ ತಿಳಿಯದು. ಎಲೈ ಮಹಾದೇವನೇ! ನೀನು ಹೇಗಿರುವೆಯೋ ಹಾಗಿರುವ ನಿನಗೆ ನನ್ನ ನಮಸ್ಕಾರ ॥೪೧॥

**ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಯಃ ಪಠೇನ್ನರಃ ।**
**ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥**

ಈ ಸ್ತೋತ್ರವನ್ನು ದಿನದಲ್ಲಿ ಒಂದು ಸಲ, ಎರಡು ಸಲ, ಅಥವಾ ಮೂರಸಲ ಹೇಳುವ ಮನುಷ್ಯನು ಪಾಪಗಳಿಂದ ಮುಕ್ತನಾಗಿ ಶಿವಲೋಕದಲ್ಲಿ ಆದರಣೀಯನಾಗುತ್ತಾನೆ ॥೪೨॥

ಶ್ರೀಪುಷ್ಪದಂತಮುಖಪಂಕಜನಿರ್ಗತೇನ
ಸ್ತೋತ್ರೇಣ ಕಿಲ್ಬಿಷ ಹರೇಣ ಹರಪ್ರಿಯೇಣ ।
ಕಂಠಸ್ಥಿತೇನ ಪಠಿತೇನ ಸಮಾಹಿತೇನ
ಸುಪ್ರೀಣಿತೋ ಭವತಿ ಭೂತಪತಿರ್ಮಹೇಶಃ ॥

ಶ್ರೀಪುಷ್ಪದಂತನ ಮುಖಕಮಲದಿಂದ ಹೊರಬಿದ್ದ ಶ್ರೀ ಶಿವನಿಗೆ ಪ್ರಿಯವಾದ, ಪಾಪಗಳನ್ನು ಇಲ್ಲವಾಗಿಸುವ ಈ ಸ್ತೋತ್ರವನ್ನು ಏಕಾಗ್ರತೆಯಿಂದ ಪಠಿಸಿದರೆ ಚರಾಚರದ ಅಧಿಪತಿ ಭಗವಾನ್ ಶ್ರೀಮಹೇಶ್ವರನು ಅತ್ಯಂತ ಸಂತುಷ್ಟನಾಗುವನು ॥೪೩॥

॥ ಶ್ರೀ ಪುಷ್ಪದಂತ ವಿರಚಿತ ಶಿವಮಹಿಮ್ನಃ ಸ್ತೋತ್ರಂ ಸಂಪೂರ್ಣಮ್ ॥

# ಶ್ರೀ ಶಿವಮಾನಸಾ ಪೂಜಾ

ರತ್ನೈಃ ಕಲ್ಪಿತಮಾಸನಂ ಹಿಮಜಲೈಃ ಸ್ನಾನಂ ಚ ದಿವ್ಯಾಂಬರಂ
ನಾನಾರತ್ನ ವಿಭೂಷಿತಂ ಮೃಗಮದಾಮೋದಾಂಕಿತಂ ಚಂದನಂ ।
ಜಾತೀ ಚಂಪಕ ಬಿಲ್ವಪತ್ರರಚಿತಂ ಪುಷ್ಪಂ ಚ ಧೂಪಂ ತಥಾ
ದೀಪಂ ದೇವ ದಯಾನಿಧೇ ಪಶುಪತೇ ಹೃತ್ಕಲ್ಪಿತಂ ಗೃಹ್ಯತಾಮ್ ॥

ಎಲೈ ದಯಾಸಾಗರ, ದೇವಾ, ಪಶುಪತೇ ! ನಾನು ಮನಸ್ಸಿನಿಂದ ನಿನಗೆ ಕುಳಿತುಕೊಳ್ಳಲು ರತ್ನಖಚಿತ ಸಿಂಹಾಸನವನ್ನು, ಸ್ನಾನಕ್ಕಾಗಿ ತಣ್ಣಗಿನ ನೀರನ್ನು, ಉಡಲು ದಿವ್ಯ ವಸ್ತ್ರಗಳನ್ನು, ಅನೇಕ ರತ್ನಖಚಿತ ಒಡವೆಗಳನ್ನು, ಕಸ್ತುರೀ ಸುಗಂಧವುಳ್ಳ ಚಂದನವನ್ನು, ಜಾಜಿ, ಸಂಪಿಗೆ, ಬಿಲ್ವಪತ್ರೆ ಮುಂತಾದ ಹೂವುಗಳನ್ನು, ಧೂಪ ಮತ್ತು ದೀಪಗಳನ್ನು ಸಿದ್ಧಪಡಿಸಿರುವೆನು, ನೀನು ಇವನ್ನು ಸ್ವೀಕರಿಸಬೇಕು. ॥೧॥

ಸೌವರ್ಣೇ ನವರತ್ನ ಖಂಡ ರಚಿತೇ ಪಾತ್ರೇ ಘೃತಂ ಪಾಯಸಮ್
ಭಕ್ಷ್ಯಂ ಪಂಚವಿಧಂ ಪಯೋದಧಿಯುತಂ ರಂಭಾಫಲಂ ಪಾನಕಮ್ ।
ಶಾಕಾನಾಮಯುತಂ ಜಲಂ ರುಚಿಕರಂ ಕರ್ಪೂರ ಖಂಡೋಜ್ವಲಂ
ತಾಂಬೂಲಂ ಮನಸಾ ಮಯಾ ವಿರಚಿತಂ ಭಕ್ತ್ಯಾಪ್ರಭೋ ಸ್ವೀಕುರು ॥

ಹೊಳೆಯುವ ರತ್ನಗಳನ್ನು ಕೂಡಿದ ಸುವರ್ಣ ಪಾತ್ರೆಯಲ್ಲಿ ತುಪ್ಪ, ಪಾಯಸ, ಪಂಚ - ಪಕ್ವಾನ್ನಗಳು, ಹಾಲು, ಮೊಸರು, ಬಾಳೆಹಣ್ಣು, ಪಾನಕ, ಅನೇಕ ಪಲ್ಯಗಳು, ರುಚಿಕರವಾದ ನೀರು, ಕರ್ಪೂರ ಮಿಶ್ರಿತ ತಾಂಬೂಲ ಇವೆಲ್ಲವನ್ನೂ ನಾನು ಮನಸ್ಸಿನಿಂದ ಭಕ್ತಿಯಿಂದ ಸಿದ್ಧಪಡಿಸಿರುವೆನು. ಪ್ರಭೋ ! ಇವನ್ನು ಸ್ವೀಕರಿಸಬೇಕು. ॥೨॥

ಛತ್ರಂ ಚಾಮರಯೋರ್ಯುಗಂ ವ್ಯಜನಕಂ ಚಾದರ್ಶಕಂ ನಿರ್ಮಲಂ
ವೀಣಾಭೇರಿ ಮೃದಂಗ ಕಾಹಲಕಲಾ ಗೀತಂ ಚ ನೃತ್ಯಂ ತಥಾ ।
ಸಾಷ್ಟಾಂಗಂ ಪ್ರಣತಿಃ ಸ್ತುತಿರ್ಬಹುವಿಧಾ ಏತತ್ಸಮಸ್ತಂ ಮಯಾ
ಸಂಕಲ್ಪೇನ ಸಮರ್ಪಿತಂ ತವ ವಿಭೋ ಪೂಜಾಂ ಗೃಹಾಣ ಪ್ರಭೋ ॥

ಎಲೈ ಸರ್ವವ್ಯಾಪಕ ಪ್ರಭುವೇ ! ಛತ್ರ, ಚಾಮರ, ಬೀಸಣಿಗೆ, ನಿರ್ಮಲವಾದ ಕನ್ನಡಿ, ವೀಣೆ, ನಗಾರಿ, ಮೃದಂಗ, ತಾಳ ಮುಂತಾದ ವಾದ್ಯಗಳು, ಸಂಗೀತ, ನೃತ್ಯ , ಸಾಷ್ಟಾಂಗ ನಮಸ್ಕಾರ ಹಾಗೂ ಅನೇಕ ವಿಧದ ಸ್ತುತಿಗಳು ಇವೆಲ್ಲವನ್ನು ನಾನು ಸಂಕಲ್ಪದಿಂದ ನಿನಗೆ ಅರ್ಪಿಸಿರುವೆನು. ಇವೆಲ್ಲವನ್ನು ನೀನು ಸ್ವೀಕರಿಸಬೇಕು. ॥೩॥

**ಆತ್ಮಾ ತ್ವಂ ಗಿರಿಜಾಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ**
**ಪೂಜಾತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ ।**
**ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾಗಿರೋ**
**ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ॥**

ಎಲೈ ಶಂಭೋ ! ನೀನೇ ನನ್ನ ಆತ್ಮಾ ಆಗಿರುವೆ, ಪಾರ್ವತಿಯು ಬುದ್ಧಿಯಾಗಿದೆ, ಪ್ರಾಣಗಳೇ ಮಿತ್ರರಾಗಿವೆ, ಶರೀರವೇ ಮನೆಯಾಗಿದೆ. ವಿಷಯಗಳ ಉಪಭೋಗವೇ ನಿನ್ನ ಪೂಜೆಯು. ನಿದ್ರೆಯೇ ಸಮಾಧಿಯಾಗಿದೆ. ನಡೆಯುವುದೇ ನಿನ್ನ ಪ್ರದಕ್ಷಿಣೆ, ನುಡಿಯುವ ಮಾತುಗಳೇ ನಿನ್ನ ಸ್ತೋತ್ರಗಳು. ನಾನು ಮಾಡುವ ಎಲ್ಲ ಕರ್ಮಗಳು ನಿನ್ನದೇ ಆರಾಧನೆಯಾಗಿದೆ. ॥೪॥

**ಕರಚರಣಕೃತಂ ವಾಕ್ಕಾಯಜಂ ಕರ್ಮಜಂ ವಾ**
**ಶ್ರವಣನಯನಜಂ ವಾ ಮಾನಸಂ ವಾಪರಾಧಮ್ ।**
**ವಿಹಿತಮವಿಹಿತಂ ವಾ ಸರ್ವಮೇತತ್ಕ್ಷಮಸ್ವ**
**ಜಯ ಜಯ ಕರುಣಾಬ್ಧೇ ಶ್ರೀ ಮಹಾದೇವ ಶಂಭೋ ॥**

ಎಲೈ ಮಹಾದೇವಾ, ಕರುಣಾಸಾಗರ, ಶಂಭೋ ! ನಿನಗೆ ಜಯ ಜಯಕಾರವಿರಲಿ. ಕೈ, ಕಾಲು ವಾಣೀ, ಶರೀರ, ಕಿವಿ, ಕಣ್ಣು ಇತ್ಯಾದಿ ನನ್ನ ಇಂದ್ರಿಯಗಳಿಂದ ಅಥವಾ ಮನಸ್ಸಿನಿಂದ. ಉಚಿತವಾಗಿ ಇಲ್ಲವೇ ಅನುಚಿತವಾಗಿ ನಡೆದ ಕರ್ಮಗಳಿಂದ ಉಂಟಾದ ನನ್ನ ಅಪರಾಧಗಳೆಲ್ಲವನ್ನು ನೀನು ಕ್ಷಮಿಸಬೇಕು. ॥೫॥

॥ ಇತಿ ಶ್ರೀ ಮಚ್ಛಂಕರಾಚಾರ್ಯವಿರಚಿತಾ ಶಿವಮಾನಸಪೂಜಾ ಸಮಾಪ್ತಾ ॥



# ಶ್ರೀ ಶಿವಪಂಚಾಕ್ಷರ ಸ್ತೋತ್ರ

ನಾಗೇಂದ್ರಹಾರಾಯ ತ್ರಿಲೋಚನಾಯ ಭಸ್ಮಾಂಗರಾಗಾಯ ಮಹೇಶ್ವರಾಯ ।
ನಿತ್ಯಾಯ ಶುದ್ಧಾಯ ದಿಗಂಬರಾಯ ತಸ್ಮೈ 'ನ' ಕಾರಾಯ ನಮಃ ಶಿವಾಯ ॥೧॥

ಮಂದಾಕಿನೀಸಲಿಲಚಂದನಚರ್ಚಿತಾಯ ನಂದೀಶ್ವರ ಪ್ರಮಥನಾಥಮಹೇಶ್ವರಾಯ ।
ಮಂದಾರಪುಷ್ಪಬಹುಪುಷ್ಪ ಸುಪೂಜಿತಾಯ ತಸ್ಮೈ 'ಮ' ಕಾರಾಯ ನಮಃ ಶಿವಾಯ ॥೨॥

ಶಿವಾಯ ಗೌರೀವದನಾಬ್ಜ ವೃಂದಸೂರ್ಯಾಯ ದಕ್ಷಾಧ್ವರನಾಶಕಾಯ ।
ಶ್ರೀನೀಲಕಂಠಾಯ ವೃಷಧ್ವಜಾಯ ತಸ್ಮೈ 'ಶಿ' ಕಾರಾಯ ನಮಃ ಶಿವಾಯ ॥೩॥

ವಸಿಷ್ಠ ಕುಂಭೋದ್ಭವ ಗೌತಮಾರ್ಯ ಮುನೀಂದ್ರದೇವಾರ್ಚಿತಶೇಖರಾಯ ।
ಚಂದ್ರಾರ್ಕವೈಶ್ವಾನರಲೋಚನಾಯ ತಸ್ಮೈ 'ವ' ಕಾರಾಯ ನಮಃ ಶಿವಾಯ ॥೪॥

ಯಕ್ಷಸ್ವರೂಪಾಯ ಜಟಾಧರಾಯ ಪಿನಾಕಹಸ್ತಾಯ ಸನಾತನಾಯ ।
ದಿವ್ಯಾಯ ದೇವಾಯ ದಿಗಂಬರಾಯ ತಸ್ಮೈ 'ಯ'ಕಾರಾಯ ನಮಃ ಶಿವಾಯ ॥೫॥

ಪಂಚಾಕ್ಷರ ಮಿದಂ ಪುಣ್ಯಂ ಯಃ ಪಠೇಚ್ಛಿವ ಸನ್ನಿಧೌ
ಶಿವಲೋಕ ಮವಾಪ್ನೋತಿ ಶಿವೇನ ಸಹ ಮೋದತೇ ॥೬॥

॥ ಇತಿ ಶ್ರೀಮತ್ ಶಂಕರಾಚಾರ್ಯ ವಿರಚಿತಂ ಶಿವಪಂಚಾಕ್ಷರ ಸ್ತೋತ್ರಂ ಸಂಪೂರ್ಣಮ್ ॥



# ಶಿವಾಷ್ಟೋತ್ತರ ಶತನಾಮಾವಲಿಃ

೧. ಮಹಾಕೈಲಾಸಶಿಖರನಿಲಯಾಯ ನಮೋನಮಃ ।
೨. ಹಿಮಾಚಲೇಂದ್ರತನಯಾವಲ್ಲಭಾಯ ನಮೋನಮಃ ।
೩. ವಾಮಭಾಗಕಲತ್ರಾರ್ಧಶರೀರಾಯ ನಮೋನಮಃ ।
೪. ವಿಲಸದ್ದಿವ್ಯಕರ್ಪೂರಗೌರಾಂಗಾಯ ನಮೋನಮಃ ।
೫. ಕೋಟಿಕಂದರ್ಪಸದೃಶಲಾವಣ್ಯಾಯ ನಮೋನಮಃ ।
೬. ರತ್ನಮೌಕ್ತಿಕವೈಡೂರ್ಯಕಿರೀಟಾಯ ನಮೋನಮಃ ।
೭. ಮಂದಾಕಿನೀಜಲೋಪೇತಮೂರ್ಧಜಾಯ ನಮೋನಮಃ ।
೮. ಚಾರುಶಿತಾಂಶುಶಕಲಶೇಖರಾಯ ನಮೋನಮಃ ।
೯. ತ್ರಿಪುಂಡ್ರವಿಲಸದ್‌ಭಾಲಫಲಕಾಯ ನಮೋನಮಃ ।
೧೦. ಸೋಮಪಾವಕಮಾರ್ತಾಂಡಲೋಚನಾಯ ನಮೋನಮಃ ।

೧೧. ವಾಸುಕೀತಕ್ಷಕಲಸತ್ಕುಂಡಲಾಯ ನಮೋನಮಃ ।

೧೨. ಚಾರುಪ್ರಸನ್ನಸುಸ್ಮೇರವದನಾಯ ನಮೋನಮಃ ।

೧೩. ಸಮುದ್ರೋದ್ಭೂತಗರಲಕಂಧರಾಯ ನಮೋನಮಃ ।

೧೪. ಕುರಂಗವಿಲಸತ್ಪಾಣಿಕಮಲಾಯ ನಮೋನಮಃ ।

೧೫. ಪರಶ್ವಧಲಸದ್ದಿವ್ಯಕರಾಬ್ಜಾಯ ನಮೋನಮಃ ।

೧೬. ವರಾಭಯಪ್ರದಕರಯುಗಲಾಯ ನಮೋನಮಃ ।

೧೭. ಅನೇಕರತ್ನಮಾಣಿಕ್ಯಸುಹಾರಾಯ ನಮೋನಮಃ ।

೧೮. ಮುಕ್ತಾಸುವರ್ಣರುದ್ರಾಕ್ಷಮಾಲಿಕಾಯ ನಮೋನಮಃ ।

೧೯. ಹಿರಣ್ಯಕಿಂಕಿಣೀಯುಕ್ತಕಂಕಣಾಯ ನಮೋನಮಃ ।

೨೦. ಮಂದಾರಮಲ್ಲಿಕಾದಾಮಭೂಷಿತಾಯ ನಮೋನಮಃ ।

೨೧. ಮತ್ತಮಾತಂಗಸತ್ಕೃತ್ತಿವಸನಾಯ ನಮೋನಮಃ ।

೨೨. ನಾಗೇಂದ್ರಯಜ್ಞೋಪವೀತಶೋಭನಾಯ ನಮೋನಮಃ ।

೨೩. ಸೌದಾಮಿನೀಸಮಚ್ಛಾಯಸುವಸ್ತ್ರಾಯ ನಮೋನಮಃ ।

೨೪. ಸಂಜೀರಮಣಿಮಂಜೀರಚರಣಾಯ ನಮೋನಮಃ ।

೨೫. ಚಕ್ರಾಬ್ಜಧ್ವಜಯುಕ್ತಾಂಘ್ರಿಸರೋಜಾಯ ನಮೋನಮಃ ।

೨೬. ಅಪರ್ಣಾಕುಚಕಸ್ತೂರೀರಂಜಿತಾಯ ನಮೋನಮಃ ।

೨೭. ಗುಹಮತ್ತೇಭವದನಜನಕಾಯ ನಮೋನಮಃ ।

೨೮. ಬಿಡೌಜಾವಿಧಿವೈಕುಂಠನಮಿತಾಯ ನಮೋನಮಃ ।

೨೯. ಕಮಲಾಭಾರತೀಂದ್ರಾಣಿಸೇವಿತಾಯ ನಮೋನಮಃ ।

೩೦. ಮಹಾಪಂಚಾಕ್ಷರೀಮಂತ್ರಸ್ವರೂಪಾಯ ನಮೋನಮಃ ।

೩೧. ಸಹಸ್ರಕೋಟಿತಪನಸಂಕಾಶಾಯ ನಮೋನಮಃ ।

೩೨. ಅನೇಕಕೋಟಿಶೀತಾಂಶುಪ್ರಕಾಶಾಯ ನಮೋನಮಃ ।

೩೩. ಕೈಲಾಸತುಲ್ಯವೃಷಭವಾಹನಾಯ ನಮೋನಮಃ ।

೩೪. ನಂದೀಭೃಂಗೀಮುಖಾನೇಕ ಸಂಸ್ತುತಾಯ ನಮೋನಮಃ ।

೩೫. ನಿಜಪಾದಾಂಬುಜಾಸಕ್ತಸುಲಭಾಯ ನಮೋನಮಃ ।

೩೬. ಪ್ರಾರಬ್ಧಜನ್ಮಮರಣಮೋಚನಾಯ ನಮೋನಮಃ ।

೩೭. ಸಂಸಾರಭಯದುಃಖೌಘಭೇಷಜಾಯ ನಮೋನಮಃ ।

೩೮. ಬ್ರಹ್ಮಾದಿಕೀಟಪರ್ಯಂತವ್ಯಾಪಕಾಯ ನಮೋನಮಃ ।

೩೯. ಚರಾಚರಸ್ಥೂಲಸೂಕ್ಷ್ಮಕಲ್ಪಕಾಯ ನಮೋನಮಃ ।

೪೦. ಸರ್ವಂಸಹಾಮಹಾಚಕ್ರಸ್ಯಂದನಾಯ ನಮೋನಮಃ ।

೪೧. ಸುಧಾಕರಜಗಚ್ಚಕ್ಷೂರಥಾಂಗಾಯ ನಮೋನಮಃ ।

೪೨. ಸಾಮಾಥರ್ವರ್ಗ್ಯಜುರ್ವೇದತುರಗಾಯ ನಮೋನಮಃ ।

೪೩. ಸರಸೀರುಹಸಂಜಾತಪ್ರಾಪ್ತಸಾರಥಯೇ ನಮೋನಮಃ ।

೪೪. ವೈಕುಂಠನಾಥಜ್ವಲನಸಾಯಕಾಯ ನಮೋನಮಃ ।

೪೫. ಚಾಮೀಕರಮಹಾಶೈಲಕಾರ್ಮುಕಾಯ ನಮೋನಮಃ ।

೪೬. ಭುಜಂಗರಾಜವಿಲಸತ್ಸಿಂಜಿನೀಕೃತಯೇ ನಮೋನಮಃ ।

೪೭. ನಿಜಾಕ್ಷಿಜಾಗ್ನಿಸಂದಗ್ಧತ್ರಿಪುರಾಯ ನಮೋನಮಃ ।

೪೮. ಜಾಲಂಧರಾಸುರಶಿರಚ್ಛೇದನಾಯ ನಮೋನಮಃ ।

೪೯. ಮುರಾರಿನೇತ್ರಪೂಜ್ಯಾಂಘ್ರಿಪಂಕಜಾಯ ನಮೋನಮಃ ।

೫೦. ಸಹಸ್ರಭಾನುಸಂಕಾಶಚಕ್ರದಾಯ ನಮೋನಮಃ ।

೫೧. ಕೃತಾಂತಕಮಹಾದರ್ಪಶಮನಾಯ ನಮೋನಮಃ ।

೫೨. ಮಾರ್ಕಂಡೇಯಮನೋಭೀಷ್ಟವರದಾಯ ನಮೋನಮಃ ।

೫೩. ಜ್ವಲಜ್ವಲಾವಲೀಭೀಮವಿಷಘ್ನಾಯ ನಮೋನಮಃ ।

೫೪. ಶಿಕ್ಷಕಾಂಧಕದೈತೇಯ ವಿಕ್ರಮಾಯ ನಮೋನಮಃ ।

೫೫. ಶಂಬರಾಂತಕಲಾವಣ್ಯದೇಹಸಂಹರಿಣೇ ನಮೋನಮಃ ।

೫೬. ರತಿಪ್ರಾರ್ಥಿತ ಮಾಂಗಲ್ಯಫಲದಾಯ ನಮೋನಮಃ ।

೫೭. ಸ್ವದ್ರೋಹಿದಕ್ಷಸವನವಿಘಾತಾಯ ನಮೋನಮಃ ।

೫೮. ಸನಕಾದಿಸಮಾಯುಕ್ತದಕ್ಷಿಣಾಮೂರ್ತಯೇ ನಮೋನಮಃ ।

೫೯. ಘೋರಾಪಸ್ಮಾರದನುಜಶಮನಾಯ ನಮೋನಮಃ ।

೬೦. ಅನಂತವೇದವೇದಾಂತಸಂವೇದ್ಯಾಯ ನಮೋನಮಃ ।

೬೧. ನಾಸಾಗ್ರನ್ಯಸ್ತನಿಟಿಲನಯನಾಯ ನಮೋನಮಃ ।

೬೨. ಉಪಮನ್ಯುಮಹಾಮೋಹಭಂಜನಾಯ ನಮೋನಮಃ ।

೬೩. ಕೇಶವಬ್ರಹ್ಮಸಂಗ್ರಾಮವಾರಕಾಯ ನಮೋನಮಃ ।

೬೪. ದ್ರುಹಿಣಾಂಭೋಜನಯನದುರ್ಲಭಾಯ ನಮೋನಮಃ ।

೬೫. ಧರ್ಮಾರ್ಥಕಾಮಕೈವಲ್ಯಸೂಚಕಾಯ ನಮೋನಮಃ ।

೬೬. ಉತ್ಪತ್ತಿಸ್ಥಿತಿಸಂಹಾರಕಾರಣಾಯ ನಮೋನಮಃ ।

೬೭. ಅನಂತಕೋಟಿಬ್ರಹ್ಮಾಂಡನಾಯಕಾಯ ನಮೋನಮಃ ।

೬೮. ಮಹಾಕೋಲಾಹಲೋದಾರಶರಭಾಯ ನಮೋನಮಃ ।

೬೯. ನರಸಿಂಹಮಹಾಕೋಪಶಮನಾಯ ನಮೋನಮಃ ।

೭೦. ಪ್ರತ್ಯಂಚನಾಶಕಲ್ಪಾಂತಭೈರವಾಯ ನಮೋನಮಃ ।

೭೧. ಹಿರಣ್ಯಗರ್ಭೋತ್ತಮಾಂಗನಿರ್ಜಿತಾಯ ನಮೋನಮಃ ।

೭೨. ಪತಂಜಲಿವ್ಯಾಘ್ರಪಾದಸನ್ನುತಾಯ ನಮೋನಮಃ ।

೭೩. ಮಹಾತಾಂಡವಚಾತುರ್ಯಪಂಡಿತಾಯ ನಮೋನಮಃ ।

೭೪. ವಿಮಲಪ್ರಣವಾಕಾಶಮಧ್ಯಗಾಯ ನಮೋನಮಃ ।

೭೫. ಮಹಾಪಾತಕತೂಲೌಘಪಾವಕಾಯ ನಮೋನಮಃ ।

೭೬. ಚಂಡೀಶದೋಷವಿಚ್ಛೇದಪ್ರವೀಣಾಯ ನಮೋನಮಃ ।

೭೭. ರಜಸ್ತಮಃಸತ್ತ್ವಗುಣಸಂಯುಕ್ತಾಯ ನಮೋನಮಃ ।

೭೮. ದಾರುಕಾವನಮೌನಿಸ್ತ್ರೀಮೋಹಿತಾಯ ನಮೋನಮಃ ।

೭೯. ಶಾಶ್ವತೈಶ್ವರ್ಯವಿಭವಸಹಿತಾಯ ನಮೋನಮಃ ।

೮೦. ಅಖಂಡ ಸಚ್ಚಿದಾನಂದ ವಿಗ್ರಹಾಯ ನಮೋನಮಃ ।

೮೧. ಅಶೇಷದೇವತಾರಾಧ್ಯಪಾದುಕಾಯ ನಮೋನಮಃ ।

೮೨. ಅಪ್ರಾಕೃತಮಹಾದಿವ್ಯಪುರಃಸ್ಥಾಯ ನಮೋನಮಃ ।

೮೩. ಭೂಮ್ಯಪ್ತೇಜೋವಾಯ್ವಾಕಾಶತುರೀಯಾಯ ನಮೋನಮಃ ।

೮೪. ವಸುಂಧರಾಮಹಾಭಾರಸೂದಿತಾಯ ನಮೋನಮಃ ।

೮೫. ದೇವಕೀಸುತಕೌಂತೇಯವರದಾಯ ನಮೋನಮಃ ।

೮೬. ಅಜ್ಞಾನತಿಮಿರಧ್ವಂಸಭಾಸ್ಕರಾಯ ನಮೋನಮಃ ।

೮೭. ಅದ್ವಯಾನಂದವಿಜ್ಞಾನಸುಖದಾಯ ನಮೋನಮಃ ।

೮೮. ಅವಿದ್ಯೋಪಾಧಿರಹಿತನಿರ್ಗುಣಾಯ ನಮೋನಮಃ ।

೮೯. ಸಪ್ತಕೋಟಿಮಹಾಮಂತ್ರಪೂರಿತಾಯ ನಮೋನಮಃ ।

೯೦. ಶಬ್ದಸ್ಪರ್ಶನಗಂಧಾದಿಸಾಧನಾಯ ನಮೋನಮಃ ।

೯೧. ಅಕ್ಷರಕ್ಷರಕೂಟಸ್ಥಪರಮಾಯ ನಮೋನಮಃ ।
೯೨. ಷೋಡಶಾಬ್ದವಯೋಪೇತದಿವ್ಯಾಂಗಾಯ ನಮೋನಮಃ ।
೯೩. ಸಹಜಾನಂದಸಂದೋಹಸಂಯುಕ್ತಾಯ ನಮೋನಮಃ ।
೯೪. ಸಹಸ್ರಾರಮಹಾಪದ್ಮಮಂಡಿತಾಯ ನಮೋನಮಃ ।
೯೫. ಅನಂತಾನಂದಬೋಧಾಂಬುನಿಧಿಸ್ಥಾಯ ನಮೋನಮಃ ।
೯೬. ಅಕಾರಾದಿಕ್ಷಕಾರಾಂತವರ್ಣಸ್ಥಾಯ ನಮೋನಮಃ ।
೯೭. ನಿಸ್ತುತೌದಾರ್ಯಸೌಭಾಗ್ಯಪ್ರಬಲಾಯ ನಮೋನಮಃ ।
೯೮. ಕೈವಲ್ಯಪರಮಾನಂದವಿಯೋಗಾಯ ನಮೋನಮಃ ।
೯೯. ಹಿರಣ್ಯಜ್ಯೋತಿರ್ವಿಭ್ರಾಜತ್ಸುಪ್ರಭಾಯ ನಮೋನಮಃ ।
೧೦೦. ಜ್ಯೋತಿಷಾಮುತ್ತಮಜ್ಯೋತೀರೂಪದಾಯ ನಮೋನಮಃ ।

೧೦೧. ಅನೌಪಮ್ಯಮಹಾಸೌಖ್ಯಪದಸ್ಥಾಯ ನಮೋನಮಃ ।
೧೦೨. ಅಚಿಂತ್ಯದಿವ್ಯಮಹಿಮರಂಜಿತಾಯ ನಮೋನಮಃ ।
೧೦೩. ಅನಿತ್ಯದೇಹವಿಭ್ರಾಂತಿವರ್ಜಿತಾಯ ನಮೋನಮಃ ।
೧೦೪. ಸಕೃತ್ಪ್ರಪನ್ನದೌಭಾಗ್ಯಭೇದನಾಯ ನಮೋನಮಃ ।
೧೦೫. ಷಟ್ತ್ರಿಂಶತ್ತತ್ತ್ವಪ್ರಾಸಾದಭೂನಾಥಾಯ ನಮೋನಮಃ ।
೧೦೬. ಆದಿಮಧ್ಯಾಂತರಹಿತದೇಹಸ್ಥಾಯ ನಮೋನಮಃ ।
೧೦೭. ಪರಮಾನಂದಸ್ವರೂಪಾರ್ಥಬೋಧಕಾಯ ನಮೋನಮಃ ।
೧೦೮. ಇಚ್ಛಾಜ್ಞಾನಕ್ರಿಯಾಶಕ್ತಿನಿಯುಕ್ತಾಯ ನಮೋನಮಃ ।
೧೦೯. ಪರಾಶಕ್ತಿಸಮಾಯುಕ್ತಪರೇಶಾಯ ನಮೋನಮಃ ।
೧೧೦. ಶ್ರೀಕಾಶೀವಿಶ್ವೇಶ್ವರಜಗದ್ರಕ್ಷಣಾರ್ಥಾಯ ನಮೋನಮಃ ।

॥ ಇತಿ ಶ್ರೀಶಿವರಹಸ್ತೋಕ್ತ ಶಿವಾಷ್ಟೋತ್ತರ ಶತನಾಮಾವಲಿಃ ಸಮಾಪ್ತಾ ॥

# ಶ್ರೀ ಶಿವಾಷ್ಟೋತ್ತರ ಶತನಾಮಸ್ತೋತ್ರಮ್

ಓಂ ಶಿವೋ ಮಹೇಶ್ವರಃ ಶಂಭುಃ ಪಿನಾಕೀ ಶಶಿಶೇಖರಃ ।
ವಾಮದೇವೋ ವಿರೂಪಾಕ್ಷಃ ಕಪರ್ದಿ ನೀಲಲೋಹಿತಃ ॥

ಶಂಕರಃ ಶೂಲಪಾಣಿಶ್ಚ ಖಟ್ವಾಂಗೀ ವಿಷ್ಣುವಲ್ಲಭಃ ।
ಶಿಪಿವಿಷ್ಟೋಽಂಬಿಕಾನಾಥಃ ಶ್ರೀಕಂಠೋ ಭಕ್ತವತ್ಸಲಃ ॥

ಭವಃ ಶರ್ವಸ್ತ್ರಿಲೋಕೇಶಃ ಶಿತಿಕಂಠಃ ಶಿವಾಪ್ರಿಯಃ ।
ಉಗ್ರಃ ಕಪಾಲೀ ಕಾಮಾರಿರಂಧಕಾಸುರಸೂದನಃ ॥

ಗಂಗಾಧರೋ ಲಲಾಟಾಕ್ಷಃ ಕಾಲಕಾಲಃ ಕೃಪಾನಿಧಿಃ ।
ಭೀಮಃ ಪರಶುಹಸ್ತಶ್ಚ ಮೃಗಪಾಣಿರ್ಜಟಾಧರಃ ॥

ಕೈಲಾಸವಾಸೀ ಕವಚೀ ಕಠೋರಸ್ತ್ರಿಪುರಾಂತಕಃ ।
ವೃಶಾಂಕೋ ವೃಷಭಾರೂಢೋ ಭಸ್ಮೋದ್ಧೂಲಿತ ವಿಗ್ರಹಃ ॥

ಸಾಮಪ್ರಿಯಃ ಸ್ವರಮಯಸ್ತ್ರಯೀಮೂರ್ತಿರನೀಶ್ವರಃ ।
ಸರ್ವಜ್ಞಃ ಪರಮಾತ್ಮಾ ಚ ಸೋಮಸೂರ್ಯಾಗ್ನಿಲೋಚನಃ ॥

ಹವಿರ್ಯಜ್ಞಮಯಃ ಸೋಮಃ ಪಂಚವಕ್ತ್ರಃ ಸದಾಶಿವಃ ।
ವಿಶ್ವೇಶ್ವರೋ ವೀರಭದ್ರೋ ಗಣನಾಥಃ ಪ್ರಜಾಪತಿಃ ॥

ಹಿರಣ್ಯರೇತಾ ದುರ್ಧರ್ಷೋ ಗಿರೀಶೋ ಗಿರಿಶೋಽನಘಃ ।
ಭುಜಂಗಭೂಷಣೋಭರ್ಗೋ ಗಿರಿಧನ್ವಾ ಗಿರಿಪ್ರಿಯಃ ॥

ಕೃತ್ತಿವಾಸಾಃ ಪುರಾರಾತಿರ್ಭಗವಾನ್ ಪ್ರಮಥಾಧಿಪಃ ।
ಮೃತ್ಯುಂಜಯಃ ಸೂಕ್ಷ್ಮತನುರ್ಜಗದ್ವ್ಯಾಪೀ ಜಗದ್ಗುರುಃ ॥

ವ್ಯೋಮಕೇಶೋ ಮಹಾಸೇನಜನಕಶ್ಚಾರುವಿಕ್ರಮಃ ।
ರುದ್ರೋ ಭೂತಪತಿಃ ಸ್ಥಾಣುರಹಿರ್ಬುಧ್ನ್ಯೋ ದಿಗಂಬರಃ ॥

ಅಷ್ಟಮೂರ್ತಿರನೇಕಾತ್ಮಾ ಸಾತ್ತ್ವಿಕಃ ಶುದ್ಧವಿಗ್ರಹಃ ।
ಶಾಶ್ವತಃ ಖಂಡಪರಶು ರಜಃ ಪಾಶವಿಮೋಚಕಃ ॥

ಮೃಡಃ ಪಶುಪತಿರ್ದೇವೋ ಮಹಾದೇವೋಽವ್ಯಯೋ ಹರಿಃ।
ಭಗನೇತ್ರಭಿದವ್ಯಕ್ತೋ ದಕ್ಷಾಧ್ವರಹರೋ ಹರಃ ॥

ಪೂಷದಂತಭಿದವ್ಯಗ್ರಃ ಸಹಸ್ರಾಕ್ಷಃ ಸಹಸ್ರಪಾತ್ ।
ಅಪವರ್ಗಪ್ರದೋಽನಂತಸ್ತಾರಕಃ ಪರಮೇಶ್ವರಃ ॥

ಅಷ್ಟೋತ್ತರ ಶತಂ ಪುಣ್ಯಂ ಶಿವದಾಸೇನ ಭಾಷಿತಮ್ ।
ಯಃ ಪಠೇತ್ ಪ್ರಯತೋ ನಿತ್ಯಂ ಶಿವೇನ ಸಹ ಮೋದತೇ ॥

॥ ಇತಿ ಶ್ರೀ ಶಿವಾಷ್ಟೋತ್ತರಶತನಾಮಾವಲಿಸ್ತೋತ್ರಂ ಸಂಪೂರ್ಣಮ್ ॥
॥ ಶ್ರೀಸಾಂಬಶಿವಾರ್ಪಣಮಸ್ತು ॥



# ಲಿಂಗಾಷ್ಟಕಮ್

ಬ್ರಹ್ಮಮುರಾರಿ ಸುರಾರ್ಚಿತ ಲಿಂಗಮ್ ನಿರ್ಮಲ ಭಾಷಿತ ಶೋಭಿತ ಲಿಂಗಮ್ ।
ಜನ್ಮಜದುಃಖವಿನಾಶನ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೧॥

ದೇವ ಮುನಿಪ್ರವರಾರ್ಚಿತ ಲಿಂಗಮ್ ಕಾಮದಹಂ ಕರುಣಾಕರಲಿಂಗಮ್ ।
ರಾವಣ ದರ್ಪವಿನಾಶನ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೨॥

ಸರ್ವಸುಗಂಧಿಸುಲೇಪಿತ ಲಿಂಗಮ್ ಬುದ್ಧಿವಿವರ್ಧನ ಕಾರಣ ಲಿಂಗಮ್ ।
ಸಿದ್ಧಸುರಾಸುರವಂದಿತ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೩॥

ಕನಕ ಮಹಾಮಣಿ ಭೂಷಿತ ಲಿಂಗಮ್ ಫಣಿಪತಿ ವೇಷ್ಟಿತ ಶೋಭಿತ ಲಿಂಗಮ್ ।
ದಕ್ಷಸುಯಜ್ಞವಿನಾಶನ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೪॥

ಕುಂಕುಮ ಚಂದನ ಲೇಪಿತ ಲಿಂಗಮ್ ಪಂಕಜಹಾರಸುಶೋಭಿತ ಲಿಂಗಮ್ ।
ಸಂಚಿತ ಪಾಪವಿನಾಶನ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೫॥
ದೇವಗಣಾರ್ಚಿತ ಸೇವಿತ ಲಿಂಗಮ್ ಭಾವೈರ್ಭಕ್ತಿಭಿರೇವಚ ಲಿಂಗಮ್ ।
ದಿನಕರ ಕೋಟಿ ಪ್ರಭಾಕರ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೬॥
ಅಷ್ಟದಲೋಪರಿವೇಷ್ಟಿತ ಲಿಂಗಮ್ ಸರ್ವಸಮುದ್ಭವ ಕಾರಣ ಲಿಂಗಮ್ ।
ಅಷ್ಟದರಿದ್ರವಿನಾಶನ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೭॥
ಸುರಗುರು ಸುರವರ ಪೂಜಿತ ಲಿಂಗಮ್ ಸುರವನ ಪುಷ್ಪ ಸದಾರ್ಚಿತ ಲಿಂಗಮ್ ।
ಪರಮಪದಂ ಪರಮಾತ್ಮಕ ಲಿಂಗಮ್ ತತ್ಪ್ರಣಮಾಮಿ ಸದಾಶಿವ ಲಿಂಗಮ್ ॥೮॥
ಲಿಂಗಾಷ್ಟಕಮಿದಂ ಪುಣ್ಯಂ ಯಃ ಪಠೇಚ್ಛಿವ ಸನ್ನಿಧೌ ।
ಶಿವಲೋಕಮವಾಪ್ನೋತಿ ಶಿವೇನ ಸಹ ಮೋದತೇ ॥

॥ ಇತಿ ಲಿಂಗಾಷ್ಟಕಮ್ ಸಂಪೂರ್ಣಮ್ ॥

# ದ್ವಾದಶ ಜ್ಯೋತಿರ್ಲಿಂಗಗಳು

ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಮ್ ।
ಉಜ್ಜಯಿನ್ಯಾಂ ಮಹಾಕಾಲಮೋಂಕಾರಮಮಲೇಶ್ವರಮ್ ॥

ಪರಲ್ಯಾಂ ವೈದ್ಯನಾಥಂ ಚ ಡಾಕಿನ್ಯಾಂ ಭೀಮಶಂಕರಮ್ ।
ಸೇತುಬಂಧೇ ತು ರಾಮೇಶಂ ನಾಗೇಶಂ ದಾರುಕಾವನೇ ॥

ವಾರಾಣಸ್ಯಾಂ ತು ವಿಶ್ವೇಶಂ ತ್ರ್ಯಂಬಕಂ ಗೌತಮೀ ತಟೇ ।
ಹಿಮಾಲಯೇ ತು ಕೇದಾರಂ ಘುಶ್ಮೇಶಂ ಚ ಶಿವಾಲಯೇ ॥

ಏತಾನಿ ಜ್ಯೋತಿರ್ಲಿಂಗಾನಿ ಸಾಯಂ ಪ್ರಾತಃ ಪಠೇನ್ನರಃ ।
ಸಪ್ತಜನ್ಮ ಕೃತಂ ಪಾಪಂ ಸ್ಮರಣೇನ ವಿನಶ್ಯತಿ ॥

॥ ಇತಿ ದ್ವಾದಶ ಜ್ಯೋತಿರ್ಲಿಂಗಾನಿ ಸಂಪೂರ್ಣಮ್ ॥

